RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಮಾರ್ಚ್ ೨೧, ೨೦೧೩ (ಫಾಲ್ಗುಣ ೩೦, ಶಕ ವರ್ಷ ೧೯೩೪)<br>Bangalore, Thursday, March 21, 2013 (Phalguna 30, Shaka Varsha 1934) | ಸಂಚಿಕೆ ೧೨<br>Issue 12 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕೃಷಿ ಸಚಿವಾಲಯ

**ವಿಷಯ:** 2012–13ನೇ ಸಾಲಿನ ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸೂಕ್ಷ್ಮ ನೀರಾವರಿ ಅಭಿಯಾನ ಯೋಜನೆಗೆ ರಾಜ್ಯವಲಯದಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕೃಷಿ ನಿರ್ದೇಶಕರ ಪತ್ರ ಸಂ:ಉಕೃನಿ/ಕ್ಷೇಪ್ರ/ಲ.ನೀ/ರಾಜ್ಯ ಅ.ಬಿ/7/2012–13, ದಿ. 20–07–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕೃಷಿ ನಿರ್ದೇಶಕರ ಪತ್ರದಲ್ಲಿ ಭಾರತ ಸರ್ಕಾರವು ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸೂಕ್ಷ್ಮ ನೀರಾವರಿ ಅಭಿಯಾನ ಯೋಜನೆಯಡಿ 2012–13ನೇ ಸಾಲಿಗೆ ರಾಜ್ಯಕ್ಕೆ (ಕೃಷಿ ಮತ್ತು ತೋಟಗಾರಿಕೆ ಇಲಾಖೆಯನ್ನೊಳಗೊಂಡಂತೆ) ರೂ. 15000.00 ಲಕ್ಷಗಳಿಗೆ ಹಂಚಿಕೆಯ ಕುರಿತು ಆಡಳಿತಾತ್ಮಕ ಮಂಜೂರಾತಿ ನೀಡಿರುತ್ತದೆ. ಕೇಂದ್ರ ಸರ್ಕಾರವು ಈ ಯೋಜನೆಗೆ ಮೊದಲನೇ ಕಂತಿನ ಅನುದಾನ ರೂ. 7460.43 ಲಕ್ಷಗಳನ್ನು ಬಿಡುಗಡೆ ಮಾಡಿದೆ. ರಾಜ್ಯ ಲಘು ನೀರಾವರಿ ಸಮಿತಿಯು 9ನೇ ಸಭೆಯಲ್ಲಿ ತೀರ್ಮಾನಿಸಿದಂತೆ ಕೃಷಿ ಇಲಾಖೆಗೆ ಮೊದಲನೇ ಕಂತಿನ ಅನುದಾನ ರೂ.2500.00 ಲಕ್ಷಗಳನ್ನು ಬಿಡುಗಡೆ ಮಾಡಿರುತ್ತದೆ.

ಕೇಂದ್ರದ ನೆರವಿನೊಂದಿಗೆ ರಾಜ್ಯದ ಪಾಲನ್ನು ಸಮನ್ವಯಗೊಳಿಸಿ ಕಾರ್ಯಕ್ರಮ ಅನುಷ್ಠಾನಗೊಳಿಸಬೇಕಾಗಿರುವುದರಿಂದ, ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿರುವ ಮೊದಲನೇ ಕಂತಿನ ಅನುದಾನ ರೂ. 2500.00 ಲಕ್ಷಕ್ಕೆ ಪೂರಕವಾಗಿ ರಾಜ್ಯದ ಪಾಲಿನ ಅನುದಾನ ರೂ.2187.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ:2401–00–108–1–15 (object Code:59) ರಡಿಯಲ್ಲಿ ಬಿಡುಗಡೆ ಮಾಡುವಂತೆ ಕೋರಿ ಕೃಷಿ ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃಇ/102/ಕೃಮಾಸ/2012, ಬೆಂಗಳೂರು ದಿನಾಂಕ: 24/08/2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, 2012–13ನೇ ಸಾಲಿನ ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸೂಕ್ಷ್ಮ ನೀರಾವರಿ ಅಭಿಯಾನ ಯೋಜನೆಗೆ (National Mission on Micro irrigation) ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ ಮೊದಲನೇ ಕಂತಿನ ಅನುದಾನ ರೂ.2500.00 ಲಕ್ಷಗಳಿಗೆ ಪೂರಕವಾಗಿ ರಾಜ್ಯದ ಪಾಲಿನ ಅನುದಾನ ರೂ.2187.50 ಲಕ್ಷಗಳನ್ನು (ಎರಡು ಸಾವಿರದ ಒಂದು ನೂರಾ ಎಂಬತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿ ಆದೇಶಿಸಿದೆ.

ಸದರಿ ವೆಚ್ಚವನ್ನು 2012–13ನೇ ಸಾಲಿನ ಲೆಕ್ಕ ಶೀರ್ಷಿಕೆ: 2401–00–108–1–15 (ಉಪ ಶೀರ್ಷಿಕೆ:59) ರಡಿ ಭರಿಸತಕ್ಕದ್ದು.

ಕೃಷಿ ಇಲಾಖೆಯು ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ ಅನುದಾನವನ್ನು ಸಮರ್ಪಕವಾಗಿ ಬಳಸಿ, ಕಾಲ ಕಾಲಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಕೃಇ/163/ಆಂಆಸ/2012, ದಿ: 09–08–2012 ರಲ್ಲಿ ನೀಡಿದ ಸಹಮತಿ ಅನ್ವಯ ಹಾಗೂ ಸರ್ಕಾರಿ ಆದೇಶ ಸಂ: FD/04/TFP/2012, ಬೆಂಗಳೂರು ದಿ:27–04–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್. ವಿಶ್ವನಾಥಾಚಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಇಲಾಖೆ, (ಯೋಜನೆ)

P.R. 128

## ಕೃಷಿ ಸಚಿವಾಲಯ

**ವಿಷಯ:** 2012–13ನೇ ಸಾಲಿನ ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸೂಕ್ಷ್ಮ ನೀರಾವರಿ ಅಭಿಯಾನ ಯೋಜನೆಗೆ ರಾಜ್ಯವಲಯದಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕೃಷಿ ನಿರ್ದೇಶಕರ ಪತ್ರ ಸಂ:ಉಕೃನಿ/ಕ್ಷೇಪ್ರ/ಲ.ನೀ/ರಾಜ್ಯ ಅ.ಬಿ/10/2012–13, ದಿ. 18–05–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕೃಷಿ ನಿರ್ದೇಶಕರ ಪತ್ರದಲ್ಲಿ ಭಾರತ ಸರ್ಕಾರವು ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸೂಕ್ಷ್ಮ ನೀರಾವರಿ ಅಭಿಯಾನ ಯೋಜನೆಯಡಿ 2011–12ನೇ ಸಾಲಿಗೆ ರಾಜ್ಯಕ್ಕೆ (ಕೃಷಿ ಇಲಾಖೆಗೆ) ರೂ.2764.00 ಲಕ್ಷಗಳ ಕ್ರಿಯಾ ಯೋಜನೆಗೆ ಮಂಜೂರಾತಿ ನೀಡಲಾಗಿದ್ದು, ಈ ಯೋಜನೆಯಡಿ ಕೇಂದ್ರದ ನೆರವಿನೊಂದಿಗೆ ರಾಜ್ಯದ ಪಾಲಿನ ಅನುದಾನವನ್ನು ಸಮನ್ವಯಗೊಳಿಸಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಬೇಕಾಗಿರುತ್ತದೆ. ಈ ಯೋಜನೆಯಡಿ ಕೇಂದ್ರ ಸರ್ಕಾರದಿಂದ ರೂ. 2764.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಇದಲ್ಲದೆ, 2011–12ನೇ ಸಾಲಿನಲ್ಲಿ, ಕೇಂದ್ರ ಸರ್ಕಾರವು ಹೆಚ್ಚುವರಿ ಅನುದಾನ ರೂ. 1800.00 ಲಕ್ಷಗಳನ್ನು ಬಿಡುಗಡೆಗೊಳಿಸಿ, ಈ ಅನುದಾನದಲ್ಲಿ ಕ್ರಮವಾಗಿ ರೂ.1200.00 ಲಕ್ಷಗಳನ್ನು ವಿಶೇಷ ಘಟಕ ಯೋಜನೆಗೆ ಮತ್ತು ರೂ.600.00 ಲಕ್ಷಗಳನ್ನು ಗಿರಿಜನ ಉಪಯೋಜನೆಯಡಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ.

ಈ ಹೆಚ್ಚುವರಿ ಅನುದಾನಕ್ಕೆ ಪೂರಕವಾಗಿ ರಾಜ್ಯ ಪಾಲಿನ ಅನುದಾನ ರೂ.1440.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2401–00–108–1–15 (Object Code:422, 423) ರಡಿಯಲ್ಲಿ ಬಿಡುಗಡೆ ಮಾಡುವಂತೆ ಕೋರಿ ಕೃಷಿ ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃಇ/79/ಕೃಮಾಸ/2012, ಬೆಂಗಳೂರು ದಿನಾಂಕ: 24/08/2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸೂಕ್ಷ್ಮ ನೀರಾವರಿ ಅಭಿಯಾನ ಯೋಜನೆಗೆ ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ ಹೆಚ್ಚುವರಿ ಅನುದಾನ ರೂ.1800.00 ಲಕ್ಷಗಳಿಗೆ ಪೂರಕವಾಗಿ ರಾಜ್ಯದ ಪಾಲಿನ ಅನುದಾನವಾಗಿ ವಿಶೇಷ ಘಟಕ ಯೋಜನೆಗೆ ರೂ. 960.00 ಲಕ್ಷ ಮತ್ತು ಗಿರಿಜನ ಉಪಯೋಜನೆಗೆ ರೂ.480.00 ಲಕ್ಷಗಳಂತೆ ಒಟ್ಟು ರೂ. 1440.00 ಲಕ್ಷಗಳನ್ನು (ಒಂದು ಸಾವಿರದ ನಾಲ್ಕು ನೂರಾ ನಲವತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿ ಆದೇಶಿಸಿದೆ.

ಸದರಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ:2401–00–108–1–15 (ಉಪ ಶೀರ್ಷಿಕೆ:422 423) ರಡಿ ಭರಿಸತಕ್ಕದ್ದು.

ಕೃಷಿ ಇಲಾಖೆಯು ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ ಅನುದಾನವನ್ನು ಸಮರ್ಪಕವಾಗಿ ಬಳಸಿ, ಕಾಲ ಕಾಲಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಕೃಇ/160/ಆಂಆಸ/2012, ದಿ: 08–08–2012 ರಲ್ಲಿ ನೀಡಿದ ಸಹಮತಿ ಅನ್ವಯ ಹಾಗೂ ಸರ್ಕಾರಿ ಆದೇಶ ಸಂ: FD/04/TFP/2012, ಬೆಂಗಳೂರು ದಿ:27–04–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಆರ್. ವಿಶ್ವನಾಥಾಚಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ, (ಯೋಜನೆ)

P.R. 129

## ಕೃಷಿ ಸಚಿವಾಲಯ

**ವಿಷಯ:** ಕೃಷ್ಣ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯ ಬೆಳೆಪದ್ಧತಿಗೆ ಕೃಷಿ ತಜ್ಞರ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಕೃಷಿ ಸಚಿವರ ಆಪ್ತ ಕಾರ್ಯದರ್ಶಿ ರವರ ಟಿಪ್ಪಣಿ ಸಂ:ಕೃ.ಸ./ಅ.ಕಾ/69/2010–11, ದಿ:11–08–2010.
2. ಕೃಷಿ ಆಯುಕ್ತರ ಪತ್ರ ಸಂ. ಉಕೃನಿ/ಐಸೋಪಾಂ/ಕೃಅ.ಭೂ.ಉ/2011–12, ದಿ:03–12–2011 ಮತ್ತು ದಿನಾಂಕ:27–6–2012, 29–06–2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಟಿಪ್ಪಣಿಯಲ್ಲಿ ಈಗಾಗಲೇ ಏರುತ್ತಿರುವ ಭೂ ತಾಪಮಾನ ಜಾಸ್ತಿಯಾಗಲು ಭಾರತ ದೇಶದಲ್ಲಿ ಭತ್ತ ಬೆಳೆ ಮುಖ್ಯ ಕಾರಣ. ಭತ್ತದ ಗದ್ದೆಯಿಂದ ಮಿಥೇನ್ ಹೆಚ್ಚು ಬಿಡುಗಡೆಯಾಗಿ ಭೂಮಿಯ ಕಾವಿಗೆ ಕಾರಣವಾಗುತ್ತಿದೆ. ಹೆಚ್ಚುತ್ತಿರುವ ಭೂ ತಾಪಮಾನ ನಿಯಂತ್ರಿಸಲು ಮತ್ತು ಭತ್ತ ಬೆಳೆಯಿಂದ ಆಗುವ ಕೃಷ್ಣ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯ ಬೆಳೆಪದ್ಧತಿಗೆ ಶ್ರೀ ಎಸ್.ಎ. ಪಾಟೀಲ್, ವಿಶ್ರಾಂತ ಕುಲಪತಿಗಳು, ಧಾರವಾಡ ಕೃಷಿ ವಿಶ್ವವಿದ್ಯಾಲಯ ಇವರ ನೇತೃತ್ವದಲ್ಲಿ ಕೃಷಿ ತಜ್ಞರ ಸಮಿತಿ ರಚಿಸುವಂತೆ ಕೃಷ್ಣ ಅಚ್ಚುಕಟ್ಟು ಭೂಮಿ ಉಳಿಸಿ ಹೋರಾಟ ಸಮಿತಿ, ಶಹಾಪುರ ಇದರ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಅಶೋಕ ಮಲ್ಲಾಬಾವಿ ಇವರು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿದ್ದಾರೆ.

ಮೇಲೆ ಓದಲಾದ (2)ರ ಪತ್ರಗಳಲ್ಲಿ ಕೃಷಿ ಆಯುಕ್ತರು ಕೃಷಿ ಅಚ್ಚುಕಟ್ಟು ಪ್ರದೇಶದಲ್ಲಿ ಭತ್ತದ ಬೆಳೆಯನ್ನು ಬಿಟ್ಟು ಅನ್ಯ ಬೆಳೆಯನ್ನು ಪ್ರೇರೇಪಿಸಲು ಧಾರವಾಡ ವಿಶ್ವ ವಿದ್ಯಾಲಯದ ವಿಶ್ರಾಂತ ಉಪ ಕುಲಪತಿಗಳು ಮತ್ತು ಕರ್ನಾಟಕ ಕೃಷಿ ಮಿಷನ್ ಅಧ್ಯಕ್ಷರು ಆದ ಡಾ॥ ಎಸ್.ಎ. ಪಾಟೀಲ್‌ರವರ ನೇತೃತ್ವದಲ್ಲಿ ಕೃಷಿ ತಜ್ಞರ ಸಮಿತಿಯನ್ನು ರಚಿಸಿ ಈ ಸಮಿತಿಯಲ್ಲಿ ಕೆಲವು ಅಧಿಕಾರಿಗಳನ್ನು ಹಾಗೂ ಇವರ ಜೊತೆಗೆ ಆ ವಿಭಾಗದ ರೈತ ಪ್ರತಿನಿಧಿಗಳನ್ನು ಅಥವಾ ಆ ಜಿಲ್ಲೆಗಳ ಕೃಷಿಕ ಸಮಾಜದ ಅಧ್ಯಕ್ಷರನ್ನು ಸೇರಿಸಿಕೊಂಡು ಸಮಿತಿ ರಚಿಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃಇ/94/ಕೃಮಾಸ/2011, ಬೆಂಗಳೂರು ದಿನಾಂಕ: 25/09/2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕೃಷ್ಣ ಅಚ್ಚುಕಟ್ಟು ಪ್ರದೇಶದಲ್ಲಿ ಭತ್ತದ ಬೆಳೆಯನ್ನು ಬಿಟ್ಟು ಅನ್ಯ ಬೆಳೆಯನ್ನು ಪ್ರೇರೇಪಿಸಲು ಹಾಗೂ ಈ ಪ್ರದೇಶದ ವ್ಯಾಪ್ತಿಯ ಬೆಳೆಪದ್ಧತಿಗೆ ಕೃಷಿ ತಜ್ಞರ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಿದೆ.

| ಕ್ರ.ಸ. | ಹೆಸರು | ಹುದ್ದೆ |
|---|---|---|
| 1 | ಶ್ರೀ ಎಸ್.ಎ. ಪಾಟೀಲ್, ವಿಶ್ರಾಂತ ಕುಲಪತಿಗಳು ಮತ್ತು ಅಧ್ಯಕ್ಷರು ಕರ್ನಾಟಕ ಕೃಷಿ ಮಿಷನ್, ಕೃಷಿ ವಿಶ್ವವಿದ್ಯಾಲಯ, ಧಾರವಾಡ | ಅಧ್ಯಕ್ಷರು |
| 2 | CADA-UKP ಕಾರ್ಯನಿರ್ವಾಹಕ ಅಭಿಯಂತರರು | ಸದಸ್ಯರು |
| 3 | ನೀರಾವರಿ ಇಲಾಖೆಯ ಅಭಿಯಂತರರು | ಸದಸ್ಯರು |
| 4 | ಜಂಟಿ ಕೃಷಿ ನಿರ್ದೇಶಕರು (CADA) | ಸದಸ್ಯರು |
| 5 | ಜಂಟಿ ಕೃಷಿ ನಿರ್ದೇಶಕರುಗಳು, ಗುಲ್ಬರ್ಗಾ ಮತ್ತು ಯಾದಗೀರ್ | ಸದಸ್ಯರು |
| 6 | ಕುಲಪತಿಗಳು ಕೃಷಿ ವಿಶ್ವವಿದ್ಯಾಲಯ, ರಾಯಚೂರು | ಸದಸ್ಯರು |
| 7 | ಕುಲಪತಿಗಳು, ತೋಟಗಾರಿಕೆ ವಿಶ್ವವಿದ್ಯಾಲಯ, ಬಾಗಲಕೋಟೆ | ಸದಸ್ಯರು |

ಈ ಅಧಿಕಾರಿಗಳ ಜೊತೆಗೆ ಆ ವಿಭಾಗದ ರೈತ ಪ್ರತಿನಿಧಿಗಳನ್ನು ಅಥವಾ ಆ ಜಿಲ್ಲೆಗಳ ಕೃಷಿಕ ಸಮಾಜದ ಅಧ್ಯಕ್ಷರನ್ನು ಸೇರಿಸಿಕೊಳ್ಳಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಆರ್. ವಿಶ್ವನಾಥಾಚಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ, (ಯೋಜನೆ)

**P.R. 130**

## FINANCE SECRETARIAT

**Sub:** Grant of House Rent Allowance-Guidelines-reg.

**Read:-**
1. G.O. No. FD 19 SRP 99, dated: 10.08.1999
2. G.O. No. FD 14 SRP 2002, dated: 12.04.2002
3. G.O. No. FD 10 SRP 2000, dated: 09.04.2003
4. G.O. No. FD 4 SRP 2009, dated: 31.10.2009
5. G.O. No. FD 29 SRP 2010, dated: 28.10.2010
6. G.O. No. FD 7 SRP 2012, dated: 21.04.2012

**GOVERNMENT ORDER. NO. FD 18 SRP 2012 BANGALORE, DATED: 19-10-2012**

On the basis of the recommendations of the Official Pay Committee-2011, State Government has revised the Pay Scales and Allowances of their employees with effect from 01.04.2012 vide Government Order dated:21.04.2012 read at (6) above. Therein, it was also ordered that for the purpose of House Rent Allowance, the Cities / Towns and Other Places in the State were reclassified into four classes for the purpose of HRA with reference to the population based on the 2001 Census figures and the rate of HRA was also revised with effect from 01.04.2012 as follows:-

| Population | Classification | Rate of HRA |
|---|---|---|
| 25 lakh and above | A | 25% |
| 5 lakh and above but less than 25 lakh | B | 16% |
| 50000 and above but less than 5 lakh | C | 10% |
| Less than 50000 | D | 7% |

2. The list of places falling under each of the above four classifications made for the purpose of HRA is given in the Annexure appended to this order and Government are pleased to issue the following guidelines:-
   (i) While classifying cities, towns and other places for the purpose of HRA, the population of the core area of the Municipal Corporation, CMC or TMC as per 2001 census only have been taken into account. The population of the agglomeration/out growth areas has not been added to the population of the core municipal area for determining the eligibility of that municipal corporation/town/city for HRA.
   (ii) The rate of HRA admissible to the core area covered by a particular Municipal Corporation, CMC or TMC shall also be extended to the Urban Agglomeration of that municipal corporation CMC or TMC respectively. The enumeration of

towns and cities is based on 2001 Census and the limits of Municipal Corporation, CMC or TMC and Urban Agglomeration wherever is declared shall be as notified by the Urban Development Department, in this regard.

(iii) The provision of the Government Order dated: 09.04.2003 read at (3) above, according to which a Government servant will not be eligible for House Rent Allowance if his/her spouse has been allotted rent free accommodation/rented accommodation at the same station by the State Government/ Central Government/ State or Central Public undertakings/Local Bodies/ Semi-Government Organizations/ Aided Institutions/ Co-operative Societies irrespective of whether he/she resides separately in accommodations rented by him/her shall continue to apply. However, where the husband and wife are working in difference stations, they shall be eligible to draw normal House Rent Allowance at the prescribed rates according to their entitlement.

(iv) The provisions of the Government Order dated: 31.10.2009 read at (4) above, regulating the grant of HRA & CCA to Government employees posted to any place situated within the jurisdiction of BBMP shall continue to apply.

(v) A Government servant shall not be eligible for HRA, if he/she is provided with rent free accommodation.

(vi) HRA is payable with reference to the place of duty, irrespective of the place of residence of a Government servant.

(vii) The rate of HRA applicable to a particular Municipal Corporation, CMC or TMC shall not be admissible to places situated out side the border limits of such Municipal Corporation, CMC or TMC notified by the Urban Development Department. HRA is also not admissible to areas beyond the urban agglomeration limits of a particular Municipal Corporation, CMC or TMC as the case may be, as notified by the Urban Development Department.

(viii) Admissibility of HRA during leave, suspension, joining time and training shall be regulated in accordance with the provisions of the Karnataka Civil Services Rules.

(ix) The licence fee payable by a Government servant to whom Government accommodation is available on a rental basis shall be the licence fee fixed by the competent authority in accordance with the provisions of Appendix-IV of KCSRs or the house rent allowance admissible to him whichever is more.

(x) These orders shall be applicable to all full time Government servants who are governed by the provisions of the Karnataka Civil Services Rules and who are on time scale of pay.

(xi) These orders are also applicable to (a) full-time employees borne on work-charged establishments of Government on time scale of pay, (b) full-time employees of the Aided educational institutions and non-teaching staff of the Universities who are on time-scale of pay and (c) to employees who are drawing pay in the UGC/ ICAR/ AICTE/ NJPC scales of pay.

3. This order is issued in supersession of all the earlier orders issued relating to HRA.

By Order and in the name of the Governor of Karnataka

**SUNDARA RAJA GUPTHA**

Deputy Secretary to Government

Finance Department (Services-2)

**Annexure to Government Order No. FD 18 SRP 2012,**

**Dated: 19th October 2012**

**List of places for the purpose of House Rent Allowance**

**"A" Class City**

Bruhath Bangalore Mahanagara Palike

(Places situated within the BBMP limits as notified in Notification No. UDD 92 MNY 2006, dated: 16.01.2007)

**"B" Class Cities**

Mysore Municipal Corporation

Hubli-Dharwad Municipal Corporation

**"C" Class Cities**

Belgaum, Bellary, Davanagere, Gulbarga & Mangalore Municipal Corporations, and Bagalkot, Basavakalyan, Bhadravathi, Bidar, Bijapur, Chamarajnagar, Channapatna, Chikkaballapur, Chikkamagalur, Chintamani, Chitradurga, Dhandeli, Doddaballapura, Gadag-Betgeri, Gangavathi, Gokak, Harihara, Hassan, Haveri, Hospet, Ilkal, Jamakhandi, Karwar, Kolar, Kollegal, Koppal, Madikeri, Mandya, Nippani, Rabakavi Banahatti, Raichur, Ramanagaram, Ranebennur, Robertsonpet, Sagar, Shahabad, Shimoga, Sindhanur, Sira, Sirsi, Tipatur, Tumkur, Udupi and Yadgir CMCs/ TMCs.

**"D" Class Cities**

All other places with a population of less than 50000

(as per 2001 Census figures)

**SUNDARA RAJA GUPTHA**

Deputy Secretary to Government

Finance Department (Services-2)

## ಆರ್ಥಿಕ ಸಚಿವಾಲಯ

**ವಿಷಯ:** ಮನೆ ಬಾಡಿಗೆ ಭತ್ಯೆ ಮಂಜೂರಾತಿ ಕುರಿತು ಮಾರ್ಗಸೂಚಿಗಳು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 19 ಎಸ್‌ಆರ್‌ಪಿ 99, ದಿನಾಂಕ: 10.08.1999

2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 14 ಎಸ್‌ಆರ್‌ಪಿ 2002, ದಿನಾಂಕ: 12.04.2002

3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 10 ಎಸ್‌ಆರ್‌ಪಿ 2000, ದಿನಾಂಕ: 09.04.2003

4. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಎಸ್‌ಆರ್‌ಪಿ 2009, ದಿನಾಂಕ: 31.10.2009

5. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 29 ಎಸ್‌ಆರ್‌ಪಿ 2010, ದಿನಾಂಕ: 28.10.2010

6. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಎಸ್‌ಆರ್‌ಪಿ 2012, ದಿನಾಂಕ: 21.04.2012

**ಆದೇಶ ಸಂಖ್ಯೆ: ಆಇ 18 ಎಸ್‌ಆರ್‌ಪಿ 2012 ದಿನಾಂಕ: 19.10.2012**

2011ರ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸುಗಳ ಆಧಾರದ ಮೇಲೆ ಸರ್ಕಾರವು ದಿನಾಂಕ: 01.04.2012ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರುಗಳ ವೇತನ ಶ್ರೇಣಿಗಳನ್ನು ಮತ್ತು ಇತರ ಭತ್ಯೆಗಳನ್ನು ಮೇಲೆ ಕ್ರಮ ಸಂಖ್ಯೆ(6)ರಲ್ಲಿ ಓದಲಾದ ದಿನಾಂಕ: 21.04.2012ರ ಸರ್ಕಾರಿ ಆದೇಶದಲ್ಲಿ ಪರಿಷ್ಕರಿಸಲಾಗಿರುತ್ತದೆ, ಅದರಲ್ಲಿ ಮನೆ ಬಾಡಿಗೆ ಭತ್ಯೆ ಉದ್ದೇಶಕ್ಕಾಗಿ ನಗರಗಳು / ಪಟ್ಟಣಗಳು ಮತ್ತು ಇತರ ಪ್ರದೇಶಗಳನ್ನು 2001ರ ಜನಗಣತಿ ಅಂಕಿ ಅಂಶಗಳ ಆಧಾರದ ಮೇಲೆ ನಾಲ್ಕು ವರ್ಗಗಳಾಗಿ ಪುನರ್ ವರ್ಗೀಕರಿಸಿ, ದಿನಾಂಕ: 01.04.2012ರಿಂದ ಜಾರಿಗೆ ಬರುವಂತೆ ಮನೆ ಬಾಡಿಗೆ ಭತ್ಯೆ ದರಗಳನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಿರುತ್ತದೆ.

| ಜನಸಂಖ್ಯೆ | ವರ್ಗೀಕರಣ | ಮನೆ ಬಾಡಿಗೆ ಭತ್ಯೆಯ ದರ |
|---|---|---|
| 25 ಲಕ್ಷ ಮತ್ತು ಅದಕ್ಕೂ ಹೆಚ್ಚು | ಎ | ಮೂಲ ವೇತನದ ಶೇಕಡ 25ರಷ್ಟು |
| 5 ಲಕ್ಷದಿಂದ 25 ಲಕ್ಷದವರೆಗೆ | ಬಿ | ಮೂಲ ವೇತನದ ಶೇಕಡ 16ರಷ್ಟು |
| 50,000 ರಿಂದ 5 ಲಕ್ಷದವರೆಗೆ | ಸಿ | ಮೂಲ ವೇತನದ ಶೇಕಡ 10ರಷ್ಟು |
| 50,000ಕ್ಕಿಂತ ಕಡಿಮೆ | ಡಿ | ಮೂಲ ವೇತನದ ಶೇಕಡ 7ರಷ್ಟು |

2. ಮನೆ ಬಾಡಿಗೆ ಭತ್ಯೆಯ ಉದ್ದೇಶಕ್ಕಾಗಿ ಮೇಲಿನ 4 ವರ್ಗಗಳಲ್ಲಿನ ಸ್ಥಳಗಳ ಪಟ್ಟಿಯನ್ನು ಈ ಆದೇಶದ ಅನುಬಂಧದಲ್ಲಿ ಲಗತ್ತಿಸಿದೆ ಮತ್ತು ಸರ್ಕಾರವು ಈ ಕೆಳಕಂಡಂತೆ ಮಾರ್ಗಸೂಚಿಗಳನ್ನು ಹೊರಡಿಸಲು ಹರ್ಷಿಸುತ್ತದೆ:–

(i) ಮನೆ ಬಾಡಿಗೆ ಭತ್ಯೆಯ ಉದ್ದೇಶಕ್ಕಾಗಿ ನಗರಗಳು, ಪಟ್ಟಣಗಳು ಮತ್ತು ಇತರ ಪ್ರದೇಶಗಳನ್ನು ವರ್ಗೀಕರಿಸುವಾಗ ಮಹಾನಗರ ಪಾಲಿಕೆ, ನಗರಸಭೆ ಮತ್ತು ಪುರಸಭೆಗಳ ಮೂಲ ಪ್ರದೇಶ ವ್ಯಾಪ್ತಿಯ 2001ರ ಜನಗಣತಿಯ ಜನಸಂಖ್ಯೆಯನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ಮನೆ ಬಾಡಿಗೆ ಭತ್ಯೆಯ ನಿರ್ಧಾರಣೆಯ ಉದ್ದೇಶಕ್ಕೆ, ಯಾವುದೇ ನಿರ್ದಿಷ್ಟ ಮಹಾನಗರ ಪಾಲಿಕೆ, ನಗರಸಭೆ ಮತ್ತು ಪುರಸಭೆಗಳ ಜನಸಂಖ್ಯೆಗೆ ಅವುಗಳ ನಗರ ಸಮುಚ್ಛಯ (Urban Agglomeration) / ಔಟ್‌ಗ್ರೋಥ್ (Outgrowth) ಪ್ರದೇಶಗಳ ಜನಸಂಖ್ಯೆಯನ್ನು ಸೇರಿಸಿರುವುದಿಲ್ಲ.

(ii) ಮಹಾನಗರ ಪಾಲಿಕೆ, ನಗರಸಭೆ ಅಥವಾ ಪುರಸಭೆ ಮೂಲ ಪ್ರದೇಶ ವ್ಯಾಪ್ತಿಗೆ ಅನ್ವಯವಾಗುವ ಮನೆ ಬಾಡಿಗೆ ಭತ್ಯೆಯ ದರಗಳನ್ನು ಸಂಬಂಧಿತ ಮಹಾನಗರ ಪಾಲಿಕೆ, ನಗರಸಭೆ ಅಥವಾ ಪುರಸಭೆಗಳ ನಗರ ಸಮುಚ್ಛಯ ವ್ಯಾಪ್ತಿಯ ಪ್ರದೇಶಗಳಿಗೂ ಸಹ ವಿಸ್ತರಿಸತಕ್ಕದ್ದು. ಪಟ್ಟಣ / ನಗರಗಳ ಜನಸಂಖ್ಯೆಯು 2001ರ ಜನಗಣತಿ ಆಧಾರದ ಮೇಲಿರುತ್ತದೆ, ಮತ್ತು ಮಹಾನಗರ ಪಾಲಿಕೆ, ನಗರ ಸಭೆ ಅಥವಾ ಪುರಸಭೆಗಳ ಪ್ರದೇಶ ವ್ಯಾಪ್ತಿ ಹಾಗೂ ನಗರ ಸಮುಚ್ಛಯಗಳನ್ನು ಘೋಷಿಸಿದ್ದಲ್ಲಿ, ಆ ನಗರ ಸಮುಚ್ಛಯ ಪ್ರದೇಶಗಳ ವ್ಯಾಪ್ತಿಯು ನಗರಾಭಿವೃದ್ಧಿ ಇಲಾಖೆ ಅಧಿಸೂಚಿಸಿದಂತಿರತಕ್ಕದ್ದು.

(iii) ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ದಿನಾಂಕ: 09.04.2003ರ ಸರ್ಕಾರಿ ಆದೇಶದಲ್ಲಿನ, "ಸರ್ಕಾರಿ ನೌಕರನ/ನೌಕರಳ ಪತ್ನಿಗೆ/ಪತಿಗೆ ಅದೇ ಸ್ಥಳದಲ್ಲಿ ರಾಜ್ಯ ಸರ್ಕಾರ/ಕೇಂದ್ರ ಸರ್ಕಾರ/ರಾಜ್ಯ ಅಥವಾ ಕೇಂದ್ರ ಸಾರ್ವಜನಿಕ ಉದ್ಯಮಗಳು/ಸ್ಥಳೀಯ ಸಂಸ್ಥೆಗಳು/ಅರೆ ಸರ್ಕಾರಿ ಸಂಸ್ಥೆಗಳು/ಅನುದಾನ ಪಡೆಯುವ ಸಂಸ್ಥೆಗಳು/ಸಹಕಾರಿ ಸಂಘಗಳು ಬಾಡಿಗೆ ರಹಿತ ವಾಸದ ಮನೆ/ಬಾಡಿಗೆ ವಾಸದ ಮನೆ ಹಂಚಿಕೆ ಮಾಡಿದ್ದಲ್ಲಿ, ಆ ಮನೆಯಲ್ಲಿ ಅವನು/ಅವಳು ವಾಸಿಸುತ್ತಿರಲಿ, ಇಲ್ಲದಿರಲಿ ಅಥವಾ ಅವನು/ಅವಳೂ ತಾನು ಬಾಡಿಗೆಗೆ ತೆಗೆದುಕೊಂಡ ಮನೆಯಲ್ಲಿ ಪ್ರತ್ಯೇಕವಾಗಿ ವಾಸಿಸುತ್ತಿರಲಿ, ಆ ಸರ್ಕಾರಿ ನೌಕರನು/ನೌಕರಳು ಮನೆ ಬಾಡಿಗೆ ಭತ್ಯೆ ಪಡೆಯಲು ಅರ್ಹರಾಗುವುದಿಲ್ಲ" ಎಂಬ ನಿಬಂಧನೆ ಮುಂದುವರೆದು ಅನ್ವಯಿಸುತ್ತದೆ. ಆದರೆ, ಪತಿ ಮತ್ತು ಪತ್ನಿಯು ಬೇರೆ ಬೇರೆ ಸ್ಥಳಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಲ್ಲಿ, ಅವರುಗಳು ಅವರ ಅರ್ಹತೆಯ ಮೇರೆಗೆ ಲಭ್ಯವಿರುವ ದರಗಳಲ್ಲಿ ಮನೆ ಬಾಡಿಗೆ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

(iv) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ ರಾಜ್ಯ ಸರ್ಕಾರಿ ನೌಕರರುಗಳಿಗೆ ದೊರೆಯುವ ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆ ಮಂಜೂರಾತಿಗೆ ಸಂಬಂಧಿಸಿದಂತೆ ಮೇಲೆ ಕ್ರಮ ಸಂಖ್ಯೆ(4)ರಲ್ಲಿ ಓದಲಾದ, ದಿನಾಂಕ: 31.10.2009ರ ಸರ್ಕಾರಿ ಆದೇಶದಲ್ಲಿನ ಉಪಬಂಧಗಳು ಮುಂದುವರೆದು ಅನ್ವಯಿಸುತ್ತದೆ.

(v) ಸರ್ಕಾರಿ ನೌಕರನಿಗೆ ಬಾಡಿಗೆ ರಹಿತ ವಸತಿಯನ್ನು ಒದಗಿಸಿದ್ದರೆ, ಆ ಸರ್ಕಾರಿ ನೌಕರನು ಮನೆ ಬಾಡಿಗೆ ಭತ್ಯೆಯನ್ನು ಪಡೆಯಲು ಅರ್ಹನಾಗಿರುವುದಿಲ್ಲ.

(vi) ಮನೆ ಬಾಡಿಗೆ ಭತ್ಯೆಯನ್ನು, ಸರ್ಕಾರಿ ನೌಕರನ ವಾಸಸ್ಥಳವನ್ನು ಪರಿಗಣಿಸದೆ, ಕರ್ತವ್ಯದ ಸ್ಥಳಕ್ಕೆ ಸಂಬಂಧಿಸಿದಂತೆ ಸಂದಾಯ ಮಾಡತಕ್ಕದ್ದು.

(vii) ಮಹಾನಗರ ಪಾಲಿಕೆ, ನಗರಸಭೆ ಅಥವಾ ಪುರಸಭೆಗಳಿಗೆ ಅನ್ವಯವಾಗುವ ಮನೆ ಬಾಡಿಗೆ ಭತ್ಯೆಯ ದರಗಳು, ನಗರಾಭಿವೃದ್ಧಿ ಇಲಾಖೆಯು ಅಧಿಸೂಚಿಸಿರುವ, ಸಂಬಂಧಿತ ಮಹಾನಗರ ಪಾಲಿಕೆ ನಗರಸಭೆ ಅಥವಾ ಪುರಸಭೆಗಳ ಗಡಿ ಪ್ರದೇಶಗಳ ಹೊರಗಿನ ಪ್ರದೇಶಗಳಿಗೆ ಅನ್ವಯಿಸತಕ್ಕದ್ದಲ್ಲ. ಹಾಗೂ ಸಂದರ್ಭಾನುಸಾರ ನಿರ್ದಿಷ್ಟ ಮಹಾನಗರ ಪಾಲಿಕೆ, ನಗರಸಭೆ ಅಥವಾ ಪುರಸಭೆಗಳ ನಗರ ಸಮುಚ್ಛಯ ಪ್ರದೇಶಗಳ ವ್ಯಾಪ್ತಿಯನ್ನು ನಗರಾಭಿವೃದ್ಧಿ ಇಲಾಖೆಯು ಅಧಿಸೂಚಿಸಿದ್ದಲ್ಲಿ, ಅಂತಹ ನಗರ ಸಮುಚ್ಛಯ ಪ್ರದೇಶಗಳ ಹೊರಗಿನ ಪ್ರದೇಶಗಳಿಗೆ ಸಂಬಂಧಿತ ಪ್ರದೇಶಗಳ ಮನೆ ಬಾಡಿಗೆ ಭತ್ಯೆಯ ದರಗಳು ಅನ್ವಯಿಸತಕ್ಕದ್ದಲ್ಲ.

(viii) ರಜೆ, ಅಮಾನತ್ತು, ಕೆಲಸಕ್ಕೆ ಸೇರುವ ಕಾಲ ಮತ್ತು ತರಬೇತಿ, ಅವಧಿಯಲ್ಲಿ ದೊರೆಯಬಹುದಾದ ಮನೆ ಬಾಡಿಗೆ ಭತ್ಯೆಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳ ಉಪಬಂಧಗಳ ಮೇರೆಗೆ ಕ್ರಮಬದ್ಧಗೊಳಿಸತಕ್ಕದ್ದು.

(ix) ಯಾವ ಸರ್ಕಾರಿ ನೌಕರನಿಗೆ ಬಾಡಿಗೆ ಆಧಾರದ ಮೇಲೆ ಸರ್ಕಾರದ ವಸತಿ ಗೃಹ ಸೌಲಭ್ಯವನ್ನು ಒದಗಿಸಲಾಗಿದೆಯೋ, ಆ ಸರ್ಕಾರಿ ನೌಕರನು ಸಂದಾಯ ಮಾಡತಕ್ಕ ಲೈಸೆನ್ಸ್ ಫೀ–ಯು ಕರ್ನಾಟಕ ಸರ್ಕಾರಿ ಸೇವಾ ನಿಯಾಮವಳಿಗಳ ಅನುಬಂಧ–IV ರ ಉಪಬಂಧಗಳ ರೀತ್ಯ ಸಕ್ಷಮ ಪ್ರಾಧಿಕಾರಿ ನಿಗದಿಗೊಳಿಸಿದ ಲೈಸೆನ್ಸ್ ಫೀ, ಅಥವಾ ಈ ಆದೇಶ ಉಪಬಂಧಗಳ ರೀತ್ಯ ದೊರೆಯತಕ್ಕ ಮನೆ ಬಾಡಿಗೆ ಭತ್ಯೆ, ಅವುಗಳಲ್ಲಿ ಯಾವುದು ಹೆಚ್ಚೋ, ಅದಾಗಿರುತ್ತದೆ.

(x) ಈ ಆದೇಶಗಳು ಕರ್ನಾಟಕ ನಾಗರಿಕ ಸೇವಾ ನಿಯಮಗಳ ಉಪಬಂಧಗಳ ವ್ಯಾಪ್ತಿಯೊಳಗೆ ಬರುವ ಪೂರ್ಣಕಾಲಿಕ ಮತ್ತು ಕಾಲಿಕ ವೇತನ ಶ್ರೇಣಿಯಲ್ಲಿನ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೂ ಅನ್ವಯಿಸುತ್ತದೆ.

(xi) ಈ ಆದೇಶಗಳು (ಅ) ಕಾಲಿಕ ವೇತನ ಶ್ರೇಣಿಯಲ್ಲಿರುವ ವರ್ಕ್ ಛಾರ್ಜ್ಡ್ ನೌಕರರು (ಆ) ಕಾಲಿಕ ವೇತನ ಶ್ರೇಣಿಯಲ್ಲಿರುವ ಅನುದಾನಿತ ಶಿಕ್ಷಣ ಸಂಸ್ಥೆಗಳ ಪೂರ್ಣಕಾಲಿಕ ನೌಕರರು ಮತ್ತು ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿ ಮತ್ತು (ಇ) ಯುಜಿಸಿ/ಐಸಿಎಆರ್/ಎಐಸಿಟಿಇ/ ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿ ವೇತನ ಪಡೆಯುವ ಸಿಬ್ಬಂದಿಗೆ ಅನ್ವಯಿಸುತ್ತವೆ.

3. ಮನೆ ಬಾಡಿಗೆ ಭತ್ಯೆಗೆ ಸಂಬಂಧಿಸಿದಂತೆ, ಹೊರಡಿಸಲಾಗಿರುವ ಈ ಹಿಂದಿನ ಎಲ್ಲಾ ಆದೇಶಗಳನ್ನು ರದ್ದುಗೊಳಿಸಿ ಈ ಆದೇಶವನ್ನು ಹೊರಡಿಸಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

**ಸರ್ಕಾರಿ ಆದೇಶ ಸಂ ಎಫ್‌ಡಿ 18 ಎಸ್‌ಆರ್‌ಪಿ 2012 ದಿನಾಂಕ: 19ನೇ ಅಕ್ಟೋಬರ್ 2012ರ**

**ಅನುಬಂಧ–1**

**ಮನೆ ಬಾಡಿಗೆ ಭತ್ಯೆಯ ಉದ್ದೇಶಕ್ಕಾಗಿ ಸ್ಥಳಗಳ ಪಟ್ಟಿ**

**"ಎ" ವರ್ಗದ ನಗರ**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ**

ದಿನಾಂಕ: 16.01.2007ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಯುಡಿಡಿ 92 ಎಂಎನ್‌ವೈ 2006ರಲ್ಲಿ

ಅಧಿಸೂಚಿಸಿರುವ ಗಡಿ ಪ್ರದೇಶಗಳ ವ್ಯಾಪ್ತಿಯೊಳಗಿರುವ ಬಿಬಿಎಂಪಿ ಪ್ರದೇಶ

"ಬಿ" ವರ್ಗದ ನಗರಗಳು

ಮೈಸೂರು ಮಹಾನಗರ ಪಾಲಿಕೆ,

ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ

**"ಸಿ" ವರ್ಗದ ನಗರಗಳು**

ಬೆಳಗಾಂ,ಬಳ್ಳಾರಿ, ದಾವಣಗೆರೆ,ಗುಲ್ಬರ್ಗಾ ಮತ್ತು ಮಂಗಳೂರು ಮಹಾನಗರ ಪಾಲಿಕೆಗಳು, ಮತ್ತು ಬಾಗಲಕೋಟೆ, ಬಸವಕಲ್ಯಾಣ, ಭದ್ರಾವತಿ, ಬೀದರ್, ಬಿಜಾಪುರ, ಚಾಮರಾಜನಗರ, ಚನ್ನಪಟ್ಟಣ, ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ಚಿಂತಾಮಣಿ, ಚಿತ್ರದುರ್ಗ, ದಾಂಡೇಲಿ, ದೊಡ್ಡಬಳ್ಳಾಪುರ, ಗದಗ–ಬೆಟಗೇರಿ, ಗಂಗಾವತಿ, ಗೋಕಾಕ, ಹರಿಹರ, ಹಾಸನ, ಹಾವೇರಿ, ಹೊಸಪೇಟೆ, ಇಲಕಲ್, ಜಮಖಂಡಿ, ಕಾರವಾರ, ಕೋಲಾರ, ಕೊಳ್ಳೇಗಾಲ, ಕೊಪ್ಪಳ, ಮಡಿಕೇರಿ, ಮಂಡ್ಯ, ನಿಪ್ಪಾಣಿ, ರಬಕವಿ ಬನಹಟ್ಟಿ, ರಾಯಚೂರು, ರಾಮನಗರ, ರಾಣಿಬೆನ್ನೂರು, ರಾಬರ್ಟ್‌ಸನ್ ಪೇಟೆ, ಸಾಗರ, ಶಹಬಾದ್, ಶಿವಮೊಗ್ಗ, ಸಿಂಧನೂರು, ಸಿರಾ, ಶಿರಸಿ, ತಿಪಟೂರು, ತುಮಕೂರು, ಉಡುಪಿ ಮತ್ತು ಯಾದಗಿರಿ ನಗರಸಭೆಗಳು / ಪುರಸಭೆಗಳು.

**"ಡಿ" ವರ್ಗದ ಪಟ್ಟಣಗಳು**

50,000ಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಎಲ್ಲಾ ಇತರೆ ಸ್ಥಳಗಳು

(2001ರ ಜನಗಣತಿಯಂತೆ)

**ಸುಂದರ ರಾಜ ಗುಪ್ತ**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕುಶಾಲನಗರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 5,344.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ: ಕಜಮಂ: /ತಾಂತ್ರಿಕ/ ಕುಶಾಲನಗರ–ಒ.ಚ.ಯೋ/09/4342/2011–12, ದಿನಾಂಕ : 20–03–2012.

**ಪ್ರಸ್ತಾವನೆ :**

ಕುಶಾಲನಗರ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯಂತೆ 13,262–ಇದ್ದು ಪ್ರಸ್ತುತ 16,000 ಇರುತ್ತದೆ, ಈ ಪಟ್ಟಣದ ಜನಸಂಖ್ಯೆಯು 2027ರ ಮಧ್ಯಂತರ ಅವಧಿಯಲ್ಲಿ 38,800 ಮತ್ತು 2042ರ ಅಂತಿಮ ಅವಧಿಗೆ 60,400 ಆಗಬಹುದೆಂದು ನಿರೀಕ್ಷಿಸಲಾಗಿದೆ. ಕುಶಾಲನಗರ ಪಟ್ಟಣ, ಮುಳ್ಳುಸೋಗೆ ಮತ್ತು ಗುಮ್ಮನಕೊಲ್ಲಿ ಹಳ್ಳಿಗಳಿಗೆ ಕಾವೇರಿ ನದಿ ಮೂಲದಿಂದ 2.27 ಎಂಎಲ್‌ಡಿ ಸಾಮರ್ಥ್ಯದ ನೀರು ಸರಬರಾಜು ಯೋಜನೆಯನ್ನು 2001ರಲ್ಲಿ ಚಾಲನೆಗೊಳಿಸಲಾಗಿದೆ. ಇದರೊಂದಿಗೆ 1986ರಲ್ಲಿ ಚಾಲ್ತಿಗೊಳಿಸಲಾದ ಹಾಲಿ 1.3 ಎಂ.ಎಲ್‌ಡಿ ಸಾಮರ್ಥ್ಯದ ಯೋಜನೆಯನ್ನು ಸಹ ಉಪಯೋಗಿಸಲಾಗುತ್ತಿದ್ದು, ಈ ಯೋಜನೆಗಳ ಜೊತೆ ವಿದ್ಯುತ್ ಚಾಲಿತ ಕೊಳವೆ ಬಾವಿಗಳು ಹಾಗೂ ತೆರೆದ ಬಾವಿಗಳ ಮೂಲಗಳಿಂದ ನೀರು ಸರಬರಾಜು ಮಾಡಲಾಗುತ್ತಿದ್ದು, ಕುಶಾಲನಗರ ಪಟ್ಟಣ, ಮುಳ್ಳುಸೋಗೆ ಮತ್ತು ಗುಮ್ಮನಕೊಲ್ಲಿ ಹಳ್ಳಿಗಳಿಗೆ ನೀರು ಸರಬರಾಜು ವ್ಯವಸ್ಥೆಯನ್ನು ಮಂಡಳಿವತಿಯಿಂದ ನಿರ್ವಹಿಸಲಾಗುತ್ತಿದೆ.

ಪ್ರಸ್ತುತ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಸಾರ್ವಜನಿಕರು ಸೆಪ್ಟಿಕ್ ಟ್ಯಾಂಕ್ ಅಥವಾ ಲೀಚ್‌ಪಿಟ್‌ಗಳನ್ನು ನಿರ್ಮಿಸಿಕೊಂಡಿದ್ದು ಉಳಿದವರು ಮಲೀನ ನೀರನ್ನು ತೆರೆದ ಚರಂಡಿಗಳಲ್ಲಿ ಹರಿಯಲು ಬಿಡುತ್ತಿದ್ದಾರೆ. ಇದರಿಂದಾಗಿ ನೈರ್ಮಲ್ಯ ಸಮಸ್ಯೆ ಹಾಗೂ ಅಂತರ್ಜಲ ಮತ್ತು ಮೇಲ್ಮೈ ನೀರಿನ ಮೂಲ ಕಲುಷಿತಗೊಳ್ಳುತ್ತಿರುವುದರಿಂದ ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮವಾಗುವ ಸಾಧ್ಯತೆ ಇದೆ ಆದ್ದರಿಂದ ಒಳಚರಂಡಿ ಯೋಜನೆ ಕಲ್ಪಿಸುವುದು ಅವಶ್ಯಕವಾಗಿರುತ್ತದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಸದರಿ ಪಟ್ಟಣವು ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವುದರಿಂದ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | | |
|---|---|---|
| ಕರ್ನಾಟಕ ಸರ್ಕಾರದ ಅನುದಾನ (95%) | ರೂ. | 5076.80 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ಕೊಡುಗೆ (05%) | ರೂ. | 267.20 ಲಕ್ಷಗಳು |
| | **ರೂ.** | **5344.00 ಲಕ್ಷಗಳು** |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ರೂ. 2000.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಕುಶಾಲನಗರ ಪಟ್ಟಣ ಪಂಚಾಯಿತಿಯು ದಿನಾಂಕ : 31–10–2011 ರಂದು ನಡೆದ ಸಾಮಾನ್ಯ ಸಭೆಯಲ್ಲಿ ಸದರಿ ಯೋಜನೆಯ ಆರ್ಥಿಕ ಮಾದರಿಯಂತೆ ತನ್ನ ಪಾಲಿನ ಮೊತ್ತವಾದ ರೂ. 267.20 ಲಕ್ಷಗಳನ್ನು ಭರಿಸುವ ಒಪ್ಪಿಗೆ ನೀಡಿರುತ್ತದೆ. ಯೋಜನೆಯನ್ನು ಕಾರ್ಯಗತಗೊಳಿಸುವಾಗ ಸಾಮಗ್ರಿಗಳ ಬೆಲೆಯಿಂದ ಏರಿಕೆಯಾದಲ್ಲಿ ಮತ್ತು ಇನ್ನಿತರ ಅನಿರೀಕ್ಷಿತ ಕಾರಣಗಳಿಂದ ಅಂದಾಜಿಗಿಂತ ಹೆಚ್ಚಾದ ವೆಚ್ಚವನ್ನು ಭರಿಸಲು ಒಪ್ಪಿಗೆ ಸೂಚಿಸಿದ್ದು, ಸದರಿ ಯೋಜನೆಯಡಿಯಲ್ಲಿ ವೆಟ್ ವೆಲ್, ತ್ಯಾಜ್ಯ ನೀರು ಶುದ್ಧೀಕರಣ ಘಟಕ ನಿರ್ಮಿಸಲು ಹಾಗೂ ಗ್ರಾಮಸಾರ ಹೊರ ಹರಿವು ಕೊಳವೆ ಮಾರ್ಗಗಳನ್ನು ಅಳವಡಿಸಲು ಅವಶ್ಯವಿರುವ ಸ್ಥಳವನ್ನು ಪಟ್ಟಣ ಪಂಚಾಯಿತಿ ವತಿಯಿಂದ ಮಂಡಳಿಗೆ ಒದಗಿಸಲು ಒಪ್ಪಿರುತ್ತದೆ. ಇದಲ್ಲದೆ ಯೋಜನೆಯ ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಯೋಜನೆಯ ನಿರ್ವಹಣೆಯನ್ನು ವಹಿಸಿಕೊಳ್ಳಲು ಒಪ್ಪಿ ಠರಾವು ಪಾಸು ಮಾಡಲಾಗಿರುತ್ತದೆ.

ಈ ಯೋಜನೆಯ ಅಂದಾಜಿನಲ್ಲಿ ಸೇರಿಸಿರುವ ಇ.ಟಿ.ಪಿ. ದರಗಳನ್ನು ಶೇ. 5ಕ್ಕೆ ಮಿತಿಗೊಳಿಸಬೇಕಾಗಿರುತ್ತದೆ. ಇದರಿಂದ ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ. 3790.00 ಲಕ್ಷಗಳಿಗೆ ಶೇ. 5ರಂತೆ ಅಂದರೆ ರೂ. 189.50 ಲಕ್ಷಗಳನ್ನು ಇ.ಟಿ.ಪಿ., ಹಾಗೂ ರೂ. 30.00 ಲಕ್ಷಗಳನ್ನು ಲೋಕೋಪಯೋಗಿ ಮತ್ತು ವಿದ್ಯುತ್ ಇಲಾಖೆಗಳಿಗೆ ಠೇವಣಿ ರೂಪದಲ್ಲಿ ನೀಡಲು ಹಾಗೂ ಇತರೆ ವೆಚ್ಚಗಳಾದ ರೂ.0.50 ಲಕ್ಷಗಳನ್ನು ಸೇರಿಸಿ ಒಟ್ಟು ಯೋಜನೆಯ ಅಂದಾಜನ್ನು ರೂ. 0–50 ಲಕ್ಷಗಳನ್ನು ಸೇರಿಸಿ ಒಟ್ಟು ಯೋಜನೆಯ ಅಂದಾಜನ್ನು ರೂ. 4010.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 06 ಯುಡಿಎಸ್ 2012 ಬೆಂಗಳೂರು, ದಿನಾಂಕ : 25ನೇ ಆಗಸ್ಟ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕುಶಾಲನಗರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 4010 ಲಕ್ಷಗಳಲ್ಲಿ (ರೂ. ನಾಲ್ಕು ಸಾವಿರದ ಹತ್ತು ಲಕ್ಷಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. Since escalation and tender premium is to be met from ULB contribution, providing it separately in the project estimate is not right. This component is reduced to such extent in the estimate ;
2. The board shall invite the tender immediately after the handing over of the land required if any under the scheme in order to avoid time and cost run over.
3. Adequate provision to be made by the Board in the following Years for timely completion of the Project.
4. Water rates as proposed by KUWS & DB have to be implemented to meet O & M cost of UGD.
5. KTPP provisions, quality control and timely completion should ensure.
6. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

7. ಸದರಿ ಕಾಮಗಾರಿಯನ್ನು ನಿಗಧಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.
8. ಮಂಡಳಿಯು ಯೋಜನೆಗಳನ್ನು ಕೈಗೆತ್ತಿಕೊಳ್ಳಲು ನಿರ್ಧರಿಸುವಾಗ ಮೊದಲ ಆದ್ಯತೆಯನ್ನು ನೀರು ಸರಬರಾಜು ಯೋಜನೆಗಳಿಗೆ ನೀಡಿ ನಂತರ ಒಳಚರಂಡಿ ಯೋಜನೆಗಳನ್ನು ಜನಸಂಖ್ಯೆ ಅಧಿಕವಾಗಿರುವ ಸ್ಥಳೀಯ ಸಂಸ್ಥೆಗಳಲ್ಲಿ ಆದ್ಯತೆಯ ಮೇಲೆ ಒದಗಿಸಲು ಸೂಚಿಸಲಾಗಿದೆ ;
9. ರಾಜ್ಯದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ನೀರಿನ ವ್ಯವಸ್ಥೆ ಬಗ್ಗೆ ಸಂಪೂರ್ಣ ವಿವರಗಳನ್ನು ಹಾಗೂ ಸದರಿ ಸ್ಥಳೀಯ ಸಂಸ್ಥೆಯ ಜನಸಂಖ್ಯೆ ಆಧಾರದ ಮೇಲೆ ಮತ್ತು ನೀರು ಸರಬರಾಜು ವಿತರಣಾ ಗಾತ್ರದ ಮೇಲೆ ಒಳಚರಂಡಿ ಯೋಜನೆಗಳನ್ನು ಕೈಗೆತ್ತಿಕೊಳ್ಳುವ ಕುರಿತು ಸರ್ಕಾರಕ್ಕೆ ಪೂರ್ಣ ವರದಿಯನ್ನು ಮಂಡಳಿಯು ಸಲ್ಲಿಸತಕ್ಕದ್ದು.
10. ಯೋಜನೆಯ ಗಾತ್ರವನ್ನು ಕಡಿಮೆ ಮಾಡುವ ದೃಷ್ಠಿಯಿಂದ ಮತ್ತು ಕುಶಾಲನಗರ ಸ್ಥಳೀಯ ಸಂಸ್ಥೆಯ ಜನಸಂಖ್ಯೆಯು ಅತೀ ಕಡಿಮೆ ಇರುವ ಹಿನ್ನೆಲೆಯಲ್ಲಿ ಯೋಜನೆಯ ವಿನ್ಯಾಸದಲ್ಲಿ ಪ್ರಸ್ತಾಪಿಸಿರುವ ಎಸ್.ಬಿ.ಆರ್. ಟೆಕ್‌ನಾಲಜಿ, ಬಳಸಿದ್ದಲ್ಲಿ ಅತೀ ಹೆಚ್ಚು ವಿದ್ಯುತ್ಶಕ್ತಿ ಅಗತ್ಯವಿರುವುದರಿಂದ ಸ್ಥಳೀಯ ಸಂಸ್ಥೆಯ ಮೇಲೆ ನಿರ್ವಹಣಾ ವೆಚ್ಚವು ಅಧಿಕವಾಗುವ ಸಾಧ್ಯತೆ ಇರುವುದರಿಂದ ಇದನ್ನು ಬದಲಾಯಿಸುವ ಸಾಧ್ಯತೆಯನ್ನು ಮಂಡಳಿಯು ಯೋಜಿಸತಕ್ಕದ್ದು ;

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: FD 255 Exp-9/2012, ದಿನಾಂಕ: 23–07–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎಂ ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 140**

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕಿಗೆ 3 ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪತ್ರ ಸಂಖ್ಯೆ: ಲಾ 135 ಎಲ್‌ಸಿಎಲ್ 2011 ದಿನಾಂಕ 13/06/2011.
2. ಸರ್ಕಾರದ ಪತ್ರ ಸಂಖ್ಯೆ: ಲಾ 135 ಎಲ್‌ಸಿಎಲ್ 2011 ದಿನಾಂಕ 22/11/2011.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರ ಪತ್ರ ಸಂಖ್ಯೆ: ಡಿಜೆಸಿ/10579/2011, ದಿನಾಂಕ:23.12.2011.
4. ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಎಂ.ಎ.ಜಿ.(2) ಸಿಆರ್– 324/11–12 ದಿನಾಂಕ 01/10/2012.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕಿನಲ್ಲಿ ಸಿವಿಲ್ ಜೆಡ್ಜ್ ನ್ಯಾಯಾಲಯ ಮತ್ತು ಅಪರ ಸಿವಿಲ್ ಜೆಡ್ಜ್ ನ್ಯಾಯಾಲಯಗಳು ಇದ್ದು, ಜಾತಿ ಪ್ರಮಾಣ ಪತ್ರ, ಆದಾಯ ಪ್ರಮಾಣ ಪತ್ರ ಇತ್ಯಾದಿಗಳನ್ನು ಮಾಡಿಸಿಕೊಳ್ಳಲು ತುಂಬಾ ಬೇಡಿಕೆ ಇರುವುದರಿಂದ 2 ರಿಂದ 3 ನೋಟರಿಗಳನ್ನು ತುಂಬುವಂತೆ ಕೋರಿ ಸರ್ಕಾರದಲ್ಲಿ ಮನವಿಗಳನ್ನು ಸ್ವೀಕರಿಸಲಾಗಿದೆ.

ಅದರಂತೆ ಮೇಲೆ ಓದಲಾದ (1)ರ ದಿನಾಂಕ: 13–06–2011ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ನೇಮಕಗೊಂಡ ನೋಟರಿಗಳ ವಿವರ ಹಾಗೂ ಅವರುಗಳಿಗೆ ಇರುವ ಕೆಲಸದ ಒತ್ತಡದ ಬಗ್ಗೆ ಹಾಗೂ ನೋಟರಿಗಳನ್ನು ತುಂಬುವ ಬಗ್ಗೆ ಅಭಿಪ್ರಾಯವನ್ನು ಕೋರಲಾಗಿದ್ದು, ಮೇಲೆ ಓದಲಾದ (3)ರ ದಿನಾಂಕ: 23–12–2011ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಅಂಕಿ ಅಂಶಗಳ ಸಹಿತ ವಿವರಣೆಯೊಂದಿಗೆ ಕೇಂದ್ರ ಸರ್ಕಾರದಿಂದ ಯಾವ ನೋಟರಿಗಳು ನೇಮಕಗೊಂಡಿಲ್ಲವೆಂದು, ಇರುವ ಇಬ್ಬರು ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿದೆಯೆಂದೂ 3 ಜನ ನೋಟರಿಗಳ ಅವಶ್ಯಕತೆಯಿದೆಯೆಂದೂ ವರದಿ ನೀಡಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ: 22–11–2012ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರನ್ನು ನೋಟರಿಗಳ ಕೆಲಸದ ಒತ್ತಡದ ಬಗ್ಗೆ ಹಾಗೂ ನೋಟರಿಗಳನ್ನು ತುಂಬುವ ಬಗ್ಗೆ ಅಂಕಿ ಅಂಶಗಳ ಸಹಿತ ಸಮರ್ಥನೀಯ ವಿವರಣೆ ಕೋರಲಾಗಿತ್ತು.

ಮೇಲೆ ಓದಲಾದ (4)ರ ದಿನಾಂಕ:01–10–2012ರ ಪತ್ರದಲ್ಲಿ ಸಹಾ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ಪ್ರತಿಯೊಂದು ಇಲಾಖೆಯ ಹುದ್ದೆಗೆ ಅರ್ಜಿ ಸಲ್ಲಿಸಲು ವೃದ್ಧಾಪ್ಯ ವೇತನ ಮತ್ತು ಗ್ಯಾಸ್ ಸಿಲಿಂಡರ್ ಹಾಗೂ ರೇಷನ್ ಕಾರ್ಡ್ ಪಡೆಯಲು ಇತ್ಯಾದಿಗಳಿಗೆ ನೋಟರಿಗಳ ಪ್ರಮಾಣ ಪತ್ರ ಅವಶ್ಯಕತೆ ಇರುತ್ತದೆಂದೂ, ಇರುವ ಇಬ್ಬರೂ ನೋಟರಿಗಳಿಗೆ ಇರುವ ಕೆಲಸದ ಒತ್ತಡದ ಬಗ್ಗೆ ಅಂಕಿ ಅಂಶಗಳ ವಿವರಣೆ ನೀಡಿ 3 ನೋಟರಿ ಹುದ್ದೆಗಳನ್ನು ಸೃಜಿಸುವಂತೆ ಕೋರಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 135 ಎಲ್‌ಸಿಎಲ್ 2011 ಬೆಂಗಳೂರು ದಿನಾಂಕ 03/12/2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ 3 ನೋಟರಿ ಹುದ್ದೆಗಳನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು(ಆಡಳಿತ–2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 2239**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ತಿಮ್ಮೇಗೌಡ, ಹೆಚ್.ಸಿ.–465, ನಗರ ವಿಶೇಷ ಶಾಖೆ, ಬೆಂಗಳೂರು ನಗರ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಬೆಂಗಳೂರು, ಇವರ ಆದೇಶ ಸಂಖ್ಯೆ: 33/ಡಿಇ/ಆರ್–7/ಡಿಸಿಪಿ/ಉ/09 ದಿನಾಂಕ: 29–7–09
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ: 39/ಅಪೀಲು–1/2009 ದಿನಾಂಕ: 28–7–2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03–11–2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)51/2011–12 ದಿನಾಂಕ: 24–3–2012

**ಪ್ರಸ್ತಾವನೆ:**

ಶ್ರೀ ತಿಮ್ಮೇಗೌಡ, ಹೆಚ್.ಸಿ ಇವರು ಬೆಂಗಳೂರಿನ ಗಂಗಮ್ಮಗುಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಶಿಸ್ತು ಹಾಗೂ ಕರ್ತವ್ಯಲೋಪವೆಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ತಿಮ್ಮೇಗೌಡ, ಆದ ನೀವು ಗಂಗಮ್ಮಗುಡಿ ಪೊಲೀಸ್ ಠಾಣೆಯಲ್ಲಿ ಮುಖ್ಯ ಪೇದೆಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನ ನಿತ್ಯವು ಠಾಣೆಯ ಸರಹದ್ದಿನಲ್ಲಿ ಹಗಲು ಮತ್ತು ರಾತ್ರಿ ವೇಳೆಯ ಪೆಟ್ರೋಲಿಂಗ್ ಮಾಡಲು ಸಾಧ್ಯವಾಗುವುದಿಲ್ಲ. ಚೀತಾದ ಮೇಲೆ ಇಲ್ಲವೆ ಪಾಯಿಂಟ್ ಡ್ಯೂಟಿಗೆ ನೇಮಿಸಿ ಎಂದು ಪಿ.ಐ. ರವರರೊಂದಿಗೆ ವಾಗ್ವಾದ ಮಾಡಿರುತ್ತೀರಿ. ಅಲ್ಲದೇ ದಿನಾಂಕ:12–4–2009 ರಂದು ಬಂದೋಬಸ್ತ್ ಕರ್ತವ್ಯಕ್ಕೆ ಹಾಜರಾಗದೆ ಮತ್ತು ಶ್ರೀರಾಂಪುರ ಪೊಲೀಸ್ ಠಾಣಾ ಸರಹದ್ದಿನ ವಿಶೇಷ ಕರ್ತವ್ಯಕ್ಕೆ ಹೋಗದೆ ದಿನನಿತ್ಯದ ಕೆಲಸವನ್ನು ನಿರ್ವಹಿಸುವಲ್ಲಿ ಅಸಮರ್ಥರಾಗಿರುತ್ತೀರಿ.

"ನೀವು ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮೇಲಾಧಿಕಾರಿಗಳ ಆದೇಶವನ್ನು ಪಾಲಿಸುವಲ್ಲಿ ಹಾಗೂ ನೇಮಿಸುವ ಕರ್ತವ್ಯವನ್ನು ನಿರ್ವಹಿಸದೆ ಮೇಲಾಧಿಕಾರಿಗಳ ಜೊತೆ ವಾಗ್ವಾದ ಮಾಡಿ ಅಶಿಸ್ತನ್ನು ಪ್ರದರ್ಶಿಸಿ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 29–07–2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–07–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅಶಿಸ್ತು ಹಾಗೂ ಕರ್ತವ್ಯಲೋಪವೆಸಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 119 ಪೊಸಿಅ 2011 ಬೆಂಗಳೂರು, ದಿನಾಂಕ: 05–7–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ತಿಮ್ಮೇಗೌಡ, ಹೆಚ್.ಸಿ.–465, ನಗರ ವಿಶೇಷ ಶಾಖೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.23

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** 1) ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರಕ್ಕೆ ಒಂದು ಸಹಾಯಕ ಗ್ರಂಥಪಾಲಕ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರದವರಿಂದ ಸ್ವೀಕೃತವಾದ ಪತ್ರ ಸಂಖ್ಯೆ: ಕರಾಕಾಸೇಪ್ರಾ: 19 ಎಡಿಎಂ 2009 ದಿನಾಂಕ 25/02/2009, 02–07–2012 ಮತ್ತು 18–08–2012.

2) ಸರ್ಕಾರದ ಪತ್ರ ಸಂಖ್ಯೆ: ಲಾ 09 ಎಲ್‌ಎಡಿ 2009 ದಿನಾಂಕ:25/03/2009, 29-09-2010.

3) ಸರ್ಕಾರದ ಪತ್ರ ಸಂಖ್ಯೆ: ಲಾ 39 ಎಲ್‌ಎಡಿ 2012 ದಿನಾಂಕ:27-07.2012.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 25-02-2009ರ ಪತ್ರದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳು ದಿನಾಂಕ: 07-02-2009ರಂದು ನಡೆದ 22ನೇ ಸರ್ವ ಸದಸ್ಯರ ಸಭೆಯ ನಡವಳಿಗಳನ್ನು ಉಲ್ಲೇಖಿಸುತ್ತಾ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಒಂದು ಸಹಾಯಕ ಗ್ರಂಥಪಾಲಕ ಹುದ್ದೆಯನ್ನು ಸೃಜಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಗೌರವಾನ್ವಿತ ಮುಖ್ಯ ನ್ಯಾಯಮೂರ್ತಿಗಳು ಉಚ್ಚ ನ್ಯಾಯಾಲಯ, ಇವರ ಅಧ್ಯಕ್ಷತೆಯಲ್ಲಿ ನಡೆದ ಸದರಿ ಸಭೆಯಲ್ಲಿ ಗ್ರಂಥಪಾಲಕರ ಹುದ್ದೆಯನ್ನು ಸೃಜಿಸುವುದಕ್ಕೆ ಸಂಬಂಧಿಸಿದಂತೆ ಸಭೆಯ ನಿರ್ಣಯ ಈ ಕೆಳಕಂಡಂತೆ ಇರುತ್ತದೆ.

`` It is resolved to request Government of Karnataka to create one post of Assistant Librarian in Karnataka State Legal Service Authority.''

ಈ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಸಹಾಯಕ ಗ್ರಂಥಪಾಲಕರ ಹುದ್ದೆಯ ಖರ್ಚು ವೆಚ್ಚ ಹಾಗೂ ಸೇವಾ ಷರತ್ತುಗಳ ಬಗ್ಗೆ ಪೂರ್ಣ ಮಾಹಿತಿಯನ್ನು ನೀಡುವಂತೆ ಪ್ರಾಧಿಕಾರವನ್ನು ಕೋರಲಾಗಿ, ಪ್ರಾಧಿಕಾರದವರು ಮೇಲೆ ಓದಲಾದ (1)ರ ದಿನಾಂಕ: 18-08-2012ರ ಪತ್ರದಲ್ಲಿ ವಿವರಣೆಯನ್ನು ನೀಡಿರುತ್ತಾರೆ.

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಗ್ರಂಥಾಲಯವು ಬೆಂಗಳೂರು ನಗರದ ಸಿದ್ದಯ್ಯ ರಸ್ತೆಯ 'ನ್ಯಾಯ ದೇಗುಲ' ಕಟ್ಟಡದಲ್ಲಿ ಇರುತ್ತದೆ. ಈ ಕಟ್ಟಡದಲ್ಲಿ ನಾಲ್ಕು ಅಂತಸ್ತುಗಳು ಇದ್ದು ಕಟ್ಟಡದಲ್ಲಿರುವ ಎಲ್ಲಾ ನ್ಯಾಯಾಲಯಗಳ ನ್ಯಾಯಾಧೀಶರು, ವಕೀಲರು ಹಾಗೂ ಕಾನೂನು ವಿದ್ಯಾರ್ಥಿಗಳು ಪ್ರತಿನಿತ್ಯ ಸದರಿ ಗ್ರಂಥಾಲಯದ ಸೌಲಭ್ಯವನ್ನು ಪಡೆಯುತ್ತಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಒಂದು ಸಹಾಯಕ ಗ್ರಂಥಪಾಲಕ ಹುದ್ದೆಯನ್ನು ಸೃಜಿಸಲೇ ಬೇಕಾದ ಸಂದರ್ಭ ಇರುವುದನ್ನು ಗಮನಿಸಲಾಗಿದೆ.

ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 39 ಎಲ್‌ಎಡಿ 2012, ಬೆಂಗಳೂರು ದಿನಾಂಕ :12/12/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಒಂದು ಸಹಾಯಕ ಗ್ರಂಥಪಾಲಕ ಹುದ್ದೆಯನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಹುದ್ದೆಗೆ ತಗಲುವ ವೆಚ್ಚವನ್ನು ಪ್ರಾಧಿಕಾರಕ್ಕೆ ಒದಗಿಸುವ ಯೋಜನೇತರ ಸಹಾಯಾನುದಾನ ಲೆಕ್ಕ ಶೀರ್ಷಿಕೆಯಿಂದ ಭರಿಸಬಹುದಾಗಿದೆ. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 346 ವೆಚ್ಚ-10/2012 ದಿನಾಂಕ: 16-11-2012ರ ಸಹಮತಿ ಮೇರೆಗೆ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು(ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 2255**

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ವಿ.ಎಂ. ಗೋಪಾಲಕೃಷ್ಣ, ನೋಟರಿ , ಹುಣಸೂರು, ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಪತ್ರ ಸಂಖ್ಯೆ: ಲಾ 75 ಎಲ್‌ಸಿಎಲ್ 2008, ದಿನಾಂಕ:11-05-2012.
2. ಆ. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಪತ್ರ ಸಂಖ್ಯೆ:ಸಿಆರ್‌ಆರ್/ನೋಟರಿ/9407/2012, ದಿನಾಂಕ:27-07-2012. ಆ. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಅಧಿಸೂಚನೆ ಪತ್ರ ಸಂಖ್ಯೆ:ಸಿಆರ್‌ಆರ್/ನೋಟರಿ/ 10330/2012 ದಿನಾಂಕ:23-08-2012
3. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114 (ಇ) ದಿನಾಂಕ: 24-02-2009
4. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009 ದಿನಾಂಕ:14-07-2010
5. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 75 ಎಲ್‌ಸಿಎಲ್ 2008 ದಿನಾಂಕ:22-09-2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಶ್ರೀ ವಿ.ಎಂ. ಗೋಪಾಲಕೃಷ್ಣ, ನೋಟರಿ, ಹುಣಸೂರು ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಗೆ ಬದಲಿ ನೇಮಕಾತಿ ಬಗ್ಗೆ ಅಗತ್ಯ ಪ್ರಕ್ರಿಯೆಯನ್ನು ಕೈಗೊಳ್ಳುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರನ್ನು ಕೋರಿದ್ದು, ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳನ್ವಯ ಅಧಿಸೂಚನೆ ಹೊರಡಿಸುವ ಮೂಲಕ ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಸಹಾ ದಿನಾಂಕ:11-05-2012ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (2) ರಲ್ಲಿ ಓದಲಾದ ಪತ್ರದೊಂದಿಗೆ 8 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (3)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (4)ರಲ್ಲಿ ಓದಲಾದ ದಿನಾಂಕ: 14-07-2010ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ

ಹಾಜರಾಗುವಂತೆ ಮೇಲೆ (5)ರಲ್ಲಿ ಓದಲಾದ ದಿನಾಂಕ: 22-09-2012ರ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 75 ಎಲ್‌ಸಿಎಲ್ 2008 ಬೆಂಗಳೂರು ದಿನಾಂಕ:03-12-2012**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಆರ್.ಶ್ರೀನಿವಾಸಮೂರ್ತಿ, ತಂದೆ ಜಿ. ರಾಮಚಂದ್ರಯ್ಯ, ಮನೆ ನಂ. 877, ಲಾಲ್ ಬಂದ್ ಸ್ಟ್ರೀಟ್, ಹುಣಸೂರು, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ-571610ರವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹುಣಸೂರು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ -501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಗಳನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು(ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 2240**

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಹುಬ್ಬಳ್ಳಿ ನ್ಯಾಯಾಲಯಕ್ಕೆ 2 ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲಾ 03 ಎಲ್‌ಸಿಎಲ್ 2012 ದಿನಾಂಕ 02/05/2012
2. ಜಿಲ್ಲಾಧಿಕಾರಿ, ಧಾರವಾಡ ಇವರ ಪತ್ರ ಸಂಖ್ಯೆ: ಆರ್.ಕೆ/ಆಡಳಿತ/3/ ವಹಿ-9/2011-12 ದಿನಾಂಕ 21/05/2012.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರ ಪತ್ರ ಸಂಖ್ಯೆ: 1610/2012 ದಿನಾಂಕ 18/10/2012.

**ಪ್ರಸ್ತಾವನೆ:**

ಹುಬ್ಬಳ್ಳಿ ನಗರವು ಅತೀ ದೊಡ್ಡ ವಾಣಿಜ್ಯ ನಗರಿಯಾಗಿದ್ದು, ದಿನೆ ದಿನೆ ಹೊಸ ಖಾಸಗಿ ಕಂಪನಿಗಳು ಅಸ್ತಿತ್ವಕ್ಕೆ ಬರುತ್ತಿದ್ದು, ಹೊಸ ಪಾಸ್‌ಪೋರ್ಟ್ ಆಫೀಸ್ ಸಹ ಕಾರ್ಯನಿರ್ವಹಿಸುತ್ತಿದೆ ಹಾಗೂ ಹುಬ್ಬಳ್ಳಿ ಪಟ್ಟಣದ ಜನಸಂಖ್ಯೆ ಜಾಸ್ತಿಯಾಗುತ್ತಿದ್ದು, ಸುಮಾರು 8 ಲಕ್ಷ ಜನಸಂಖ್ಯೆ ಹೊಂದಿದ ದೊಡ್ಡ ಪಟ್ಟಣವಾಗಿ ಪರಿವರ್ತನೆ ಹೊಂದುತ್ತಿದ್ದು, ಸಾರ್ವಜನಿಕರಿಂದ ಪದೇ ಪದೇ 2 ಹೊಸ ನೋಟರಿ ಹುದ್ದೆಗಳನ್ನು ತುಂಬುವಂತೆ ಕೋರಿ ಸರ್ಕಾರದಲ್ಲಿ ಮನವಿಗಳನ್ನು ಸ್ವೀಕರಿಸಲಾಗಿದೆ.

ಅದರಂತೆ, ಮೇಲೆ (1) ರಲ್ಲಿ ಓದಲಾದ ದಿನಾಂಕ 02/05/2012 ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ನೇಮಕಗೊಂಡ ನೋಟರಿಗಳ ವಿವರ ಹಾಗೂ ಅವರುಗಳಿಗೆ ಇರುವ ಕೆಲಸದ ಒತ್ತಡದ ಬಗ್ಗೆ ಹಾಗೂ ನೋಟರಿಗಳನ್ನು ತುಂಬುವ ಬಗ್ಗೆ ಅಭಿಪ್ರಾಯವನ್ನು ಕೋರಲಾಗಿದ್ದು, ಮೇಲೆ ಓದಲಾದ (2) ರ ದಿನಾಂಕ 21/05/2012 ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರು ಹುಬ್ಬಳ್ಳಿ ಪಟ್ಟಣದ ಜನಸಂಖ್ಯೆ ಜಾಸ್ತಿಯಾಗುತ್ತಿದ್ದು, ಸುಮಾರು 8 ಲಕ್ಷ ಜನಸಂಖ್ಯೆ ಹೊಂದಿದ ದೊಡ್ಡ ಪಟ್ಟಣವಾಗಿ ಪರಿವರ್ತನೆ ಹೊಂದುತ್ತಿದ್ದು, ಹೊಸದಾಗಿ ಪಾಸ್‌ಪೋರ್ಟ್ ಆಫೀಸ್ ಕೂಡ ಕಾರ್ಯನಿರ್ವಹಿಸುತ್ತಿರುವುದರಿಂದ ಹುಬ್ಬಳ್ಳಿ ನ್ಯಾಯಾಲಯಕ್ಕೆ 2 ಹೊಸ ನೋಟರಿಗಳ ಹುದ್ದೆಗಳನ್ನು ಸೃಷ್ಠಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3) ರ ದಿನಾಂಕ 18/10/2012 ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರು ಹುಬ್ಬಳ್ಳಿ ಪಟ್ಟಣದಲ್ಲಿ ಜನಸಂಖ್ಯೆ ಜಾಸ್ತಿಯಾಗುತ್ತಿದ್ದು, ವಾಣಿಜ್ಯ ಮತ್ತು ಶೈಕ್ಷಣಿಕ ಸಂಸ್ಥೆಗಳ ಹೆಚ್ಚಳದಿಂದ ವ್ಯವಹಾರ ಹಾಗೂ ಸರ್ಕಾರಿ ಕಛೇರಿ ಕೆಲಸಗಳು ಹೆಚ್ಚಳವಾಗಿರುವುದರಿಂದ, ಹುಬ್ಬಳ್ಳಿ ನ್ಯಾಯಾಲಯಕ್ಕೆ 2 ಹೊಸ ನೋಟರಿ ಹುದ್ದೆಗಳನ್ನು ಸೃಜಿಸುವಂತೆ ಕೋರಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 03 ಎಲ್‌ಸಿಎಲ್ 2012 ಬೆಂಗಳೂರು ದಿನಾಂಕ 06/12/2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹುಬ್ಬಳ್ಳಿ ನ್ಯಾಯಾಲಯಕ್ಕೆ ಸಾರ್ವಜನಿಕರ ಹಿತದೃಷ್ಟಿಯಿಂದ 2 ನೋಟರಿ ಹುದ್ದೆಗಳನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು(ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 2256**

## ಇಂಧನ ಸಚಿವಾಲಯ

**ವಿಷಯ:** 2012-13ನೇ ಸಾಲಿಗೆ ಪರಿಶಿಷ್ಟ ಜಾತಿಗಳ ಉಪಯೋಜನೆಯಡಿ (SCP) ವಿದ್ಯುತ್ ಸರಬರಾಜು ಕಂಪನಿಗಳು ಕೈಗೊಂಡಿರುವ ಕಾಮಗಾರಿಗಳಿಗೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಓ 2012 ದಿನಾಂಕ 27.04.2012.

2. ಸರ್ಕಾರಿ ಆದೇಶ ಸಂಖ್ಯೆ ಇಎನ್ 22 ಪಿಎಸ್‌ಆರ್ 2012 ದಿನಾಂಕ 27.04.2012.

3. ಸಮಾಜ ಕಲ್ಯಾಣ ಇಲಾಖೆಯ ಅ.ಟಿ ಸಂಖ್ಯೆ: ಸಕಇ 31 ಎಸ್‌ಎಲ್‌ಪಿ 2012 ದಿನಾಂಕ: 11.07.2012.

4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 31 ಪಿಎಸ್‌ಆರ್ 2012 ದಿನಾಂಕ 17.07.2012.

**ಪ್ರಸ್ತಾವನೆ:**

1. 2012-13ನೇ ಸಾಲಿನ ಆಯವ್ಯಯದ ಅಂದಾಜಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆಗೆ ಲೆಕ್ಕಶೀರ್ಷಿಕೆ 4801-80-190-0-02-422ಯಡಿ ರೂ 3500.00 ಲಕ್ಷಗಳನ್ನು ಒದಗಿಸಿದೆ. ಸಮಾಜ ಕಲ್ಯಾಣ ಇಲಾಖೆ ರೂ. 3000 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆ ನೀಡಿದೆ.
2. ಸಮಾಜ ಕಲ್ಯಾಣ ಇಲಾಖೆಯ ನಡವಳಿ ದಿನಾಂಕ: 11.07.2012ರ ಪ್ರಕಾರ ಇಂಧನ ಇಲಾಖೆ ಸಲ್ಲಿಸಿರುವ ವಿಸಕಂಗಳ ಕ್ರಿಯಾಯೋಜನೆಗಳನ್ನು ಅನುಮೋದಿಸಿರುತ್ತದೆ. ಈ ಅನುದಾನವನ್ನು ಪರಿಶಿಷ್ಟ ಜಾತಿಯ ಬಸ್ತಿ/ಜನತಾ ಕಾಲೋನಿ/ತಾಂಡಗಳು ಮತ್ತು ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಪಂಪುಸೆಟ್ಟುಗಳ ವಿದ್ಯುದ್ದೀಕರಣ ಮತ್ತು ಕುಟೀರ ಜ್ಯೋತಿ ಕಾರ್ಯಕ್ರಮಗಳಿಗೆ ಬಳಸಲು ಸೂಚಿಸಿದೆ.
3. ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 17.07.2012ರಲ್ಲಿ 1000 ಲಕ್ಷಗಳನ್ನು ಮೊದಲ ಕಂತಾಗಿ ಬಿಡುಗಡೆ ಮಾಡಿದೆ.
4. 2012-13ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ರೂ.3000 ಲಕ್ಷಗಳಲ್ಲಿ, ರೂ.750 ಲಕ್ಷಗಳನ್ನು ದ್ವಿತೀಯ ಕಂತಾಗಿ ಬಿಡುಗಡೆ ಮಾಡುವ ಸಲುವಾಗಿ ಈ ಆದೇಶ ಹೊರಡಿಸಲು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 31 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 18.10.2012**

1. ಸರ್ಕಾರವು 2012-13ನೇ ಸಾಲಿಗೆ ರೂ.750 (ಏಳು ನೂರು ಐವತ್ತು ಲಕ್ಷ ರೂ.ಗಳು ಮಾತ್ರ) ಲಕ್ಷಗಳನ್ನು ದ್ವಿತೀಯ ಕಂತಾಗಿ, ಪರಿಶಿಷ್ಟ ಜಾತಿಗಳ ಉಪಯೋಜನೆಯಡಿ (SCP) ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ಲಕ್ಷ ರೂ.ಗಳಲ್ಲಿ)

| ಕ್ರಮ ಸಂಖ್ಯೆ | ವಿದ್ಯುತ್ ಸರಬರಾಜು ಕಂಪನಿಗಳು | ಮೊಬಲಗು |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 125.00 |
| 2 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 125.00 |
| 3 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 175.00 |
| 4 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 200.00 |
| 5 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | 125.00 |
| | **ಒಟ್ಟು ಮೊತ್ತ** | **750.00** |

2. ಈ ಮೊತ್ತವನ್ನು ಪರಿಶಿಷ್ಟ ಜಾತಿಯ ಬಸ್ತಿ/ಜನತಾ ಕಾಲೋನಿ/ತಾಂಡಗಳು ಮತ್ತು ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಪಂಪುಸೆಟ್ಟುಗಳ ವಿದ್ಯುದ್ದೀಕರಣ ಮತ್ತು ಕುಟೀರ ಜ್ಯೋತಿ ಕಾರ್ಯಕ್ರಮಗಳಿಗೆ ಮಾತ್ರ ಬಳಸತಕ್ಕದ್ದು ಮತ್ತು Utilization Certificate ನ್ನು ಕಳುಹಿಸತಕ್ಕದ್ದು.
3. ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 4801-80-190-0-02-422(ಯೋಜನೆ)ಯಡಿ ಭರಿಸತಕ್ಕದ್ದು.
4. ವಿದ್ಯುತ್ ಸರಬರಾಜು ಕಂಪನಿಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ: 27.04.2012 ಮತ್ತು ಎಫ್‌ಡಿ 8 ಟಿಎಫ್‌ಪಿ 2012 ದಿನಾಂಕ: 04.10.2012ರ ಪ್ರಕಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**P.R.149**

## ಇಂಧನ ಸಚಿವಾಲಯ

**ವಿಷಯ:** 2012-13ನೇ ಸಾಲಿಗೆ ಪರಿಶಿಷ್ಟ ವರ್ಗಗಳ ಉಪಯೋಜನೆಯಡಿ (TSP) ವಿದ್ಯುತ್ ಸರಬರಾಜು ಕಂಪನಿಗಳು ಕೈಗೊಂಡಿರುವ ಕಾಮಗಾರಿಗಳಿಗೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಇಎನ್ 22 ಪಿಎಸ್‌ಆರ್ 2012 ದಿನಾಂಕ 27.04.2012

2. ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ: 27.04.2012

3. ಸಮಾಜ ಕಲ್ಯಾಣ ಇಲಾಖೆಯ ಅ.ಟಿ ಸಂಖ್ಯೆ: ಸಕಇ 31 ಎಸ್‌ಎಲ್‌ಪಿ 2012 ದಿನಾಂಕ: 11.07.2012.

4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 32 ಪಿಎಸ್‌ಆರ್ 2012 ದಿನಾಂಕ 17.07.2012

ಪ್ರಸ್ತಾವನೆ:

1. 2012–13ನೇ ಸಾಲಿನ ಆಯವ್ಯಯದ ಅಂದಾಜಿನಲ್ಲಿ ಪರಿಶಿಷ್ಟ ವರ್ಗಗಳ ಉಪ–ಯೋಜನೆಯಡಿ ಲೆಕ್ಕಶೀರ್ಷಿಕೆ 4801–80–190–0–02–423 ಗಿರಿಜನ ಉಪಯೋಜನೆ ರೂ 1500 ಲಕ್ಷಗಳನ್ನು ಒದಗಿಸಿದೆ. ಸಮಾಜ ಕಲ್ಯಾಣ ಇಲಾಖೆ ರೂ.1000 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆ ನೀಡಿದೆ.
2. ಸಮಾಜ ಕಲ್ಯಾಣ ಇಲಾಖೆಯ ನಡವಳಿ ದಿನಾಂಕ: 11.07.2012ರ ಪ್ರಕಾರ ಇಂಧನ ಇಲಾಖೆ ಸಲ್ಲಿಸಿರುವ ವಿಸಕಂಗಳ ಕ್ರಿಯಾಯೋಜನೆಗಳನ್ನು ಅನುಮೋದಿಸಿರುತ್ತದೆ. ಈ ಮೊತ್ತವನ್ನು ಗಿರಿಜನರ ಜನತಾ ಕಾಲೋನಿಗಳು, ತಾಂಡಗಳು ಮತ್ತು ಕುಟೀರ ಜ್ಯೋತಿ ವಿದ್ಯುದ್ಧೀಕರಣ ಕಾರ್ಯಕ್ರಮಗಳಿಗೆ ಹಾಗೂ ಗಂಗಾ ಕಲ್ಯಾಣ ಯೋಜನೆಗೆ ಬಳಸಲು ಸೂಚಿಸಲಾಗಿದೆ.
3. ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 17–07–2012ರಲ್ಲಿ ರೂ.333 ಲಕ್ಷಗಳನ್ನು ಮೊದಲ ಕಂತಾಗಿ ಬಿಡುಗಡೆ ಮಾಡಿದೆ.
4. 2012–13ನೇ ಸಾಲಿನಲ್ಲಿ ರೂ.1000 ಲಕ್ಷಗಳಲ್ಲಿ ರೂ.250/– ಲಕ್ಷಗಳನ್ನು ದ್ವಿತೀಯ ಕಂತಾಗಿ ಬಿಡುಗಡೆ ಮಾಡುವ ಸಲುವಾಗಿ ಈ ಆದೇಶ ಹೊರಡಿಸಲು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 32 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 18.10.2012**

1. ಸರ್ಕಾರವು 2012–13ನೇ ಸಾಲಿಗೆ ರೂ.250/– (ಎರಡು ನೂರ ಐವತ್ತು ಲಕ್ಷ ರೂ.ಗಳು ಮಾತ್ರ) ಲಕ್ಷಗಳನ್ನು ದ್ವಿತೀಯ ಕಂತಾಗಿ ಪರಿಶಿಷ್ಟ ವರ್ಗಗಳ ಉಪಯೋಜನೆಯಡಿ (TSP) ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ವಿದ್ಯುತ್ ಸರಬರಾಜು ಕಂಪನಿಗಳು | ಮೊಬಲಗು |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 25.00 |
| 2 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 25.00 |
| 3 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 75.00 |
| 4 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 75.00 |
| 5 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | 50.00 |
| | **ಒಟ್ಟು ಮೊತ್ತ** | **250.00** |

2. ಸದರಿ ಮೊತ್ತವನ್ನು ಗಿರಿಜನರ, ಜನತಾ ಕಾಲೋನಿಗಳು, ತಾಂಡಗಳು ಮತ್ತು ಕುಟೀರ ಜ್ಯೋತಿ ವಿದ್ಯುದ್ಧೀಕರಣ ಕಾರ್ಯಕ್ರಮಗಳಿಗೆ ಮತ್ತು ಗಂಗಾ ಕಲ್ಯಾಣ ಯೋಜನೆಗಳಿಗೆ ಮಾತ್ರ ಬಳಸತಕ್ಕದ್ದು ಮತ್ತು **Utilization Certificate** ಗಳನ್ನು ಕಳುಹಿಸತಕ್ಕದ್ದು.
3. ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 4801–80–190–0–02–423(ಯೋಜನೆ)ಯಡಿ ಭರಿಸತಕ್ಕದ್ದು.
4. ವಿದ್ಯುತ್ ಸರಬರಾಜು ಕಂಪನಿಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯ ರವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ: 27.04.2012 ಮತ್ತು ಎಫ್‌ಡಿ 08 ಟಿಎಫ್ ಪಿ 2012 ದಿನಾಂಕ: 04–10–2012 ರ ಪ್ರಕಾರ ಸಹಮತಿಯಿಂದು ಪರಿಗಣಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**P.R.148**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್. ತಿಪ್ಪೇಸ್ವಾಮಿ, ಸಿ.ಹೆಚ್.ಸಿ.–123, ಮತ್ತು ಜೆ. ಕಾಟಪ್ಪ, ಸಿ.ಪಿ.ಸಿ.–468, ಜಗಳೂರು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಇವಿ/7/2010 (ಓ.ಬಿ. ಸಂಖ್ಯೆ: 761/2011) ದಿನಾಂಕ: 30–5–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 28/30/ಅಪೀಲು/ಸಿಬ್ಬಂದಿ/2/ 2011–12 (ಓ.ಬಿ. ಸಂಖ್ಯೆ: 106/2011–12) ದಿನಾಂಕ: 03–9–2011
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 07–02–2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/72/2011-12 ದಿ: 30-3-2012 ಮತ್ತು 09-8-2012

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 128 ಸಿಎನ್‌ಎಸ್ 2012 ದಿನಾಂಕ: 16-11-2012

**ಪ್ರಸ್ತಾವನೆ:**

ಶ್ರೀ ಹೆಚ್. ತಿಪ್ಪೇಸ್ವಾಮಿ, ಹೆಚ್.ಸಿ. ಮತ್ತು ಜೆ. ಕಾಟಪ್ಪ, ಸಿ.ಪಿ.ಸಿ., ಜಗಳೂರು ಪೋಲೀಸ್ ಠಾಣೆ, ಇವರುಗಳು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಘೋರ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರುಗಳ ವಿರುದ್ಧ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ಮತ್ತು 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

"ದಿನಾಂಕ: 31-3-2010 ರಂದು ಪಿ.ಎಸ್.ಐ., ಜಗಳೂರು ಪೋಲೀಸ್ ಠಾಣೆ ರವರು ಮೋಟಾರ್ ಸೈಕಲ್ ಕಳವು ಮಾಡುವ ಆಸಾಮಿಯಾದ ಚನ್ನಪ್ಪ ತಂದೆ ಗುರುಸಿದ್ದಪ್ಪ, 26 ವರ್ಷ, ಲಿಂಗಾಯ್ತ ಜನಾಂಗ, ವಾಸ ನಿಬಗೂರು ಗ್ರಾಮ, ಜಗಳೂರು ತಾಲೂಕ್ ಎಂಬ ಆರೋಪಿಯನ್ನು ಹಿಡಿದು ಅವನು ಕಳವು ಮಾಡಿದ ಮೋಟಾರ್ ಸೈಕಲ್‌ಗಳನ್ನು ವಶಪಡಿಸಿಕೊಳ್ಳಲು ಹೆಚ್ಚಿನ ವಿಚಾರಣೆ ನಡೆಸುವ ಸಲುವಾಗಿ ಠಾಣೆಗೆ ಕರೆತಂದು ಅವನನ್ನು ಠಾಣೆಯಲ್ಲಿ ಭದ್ರತೆಯಲ್ಲಿಟ್ಟು ಸರಿಯಾಗಿ ನೋಡಿಕೊಳ್ಳುವಂತೆ ಠಾಣಾ ಎಸ್.ಹೆಚ್.ಓ. ಕರ್ತವ್ಯದಲ್ಲಿದ್ದ ಹಾಗೂ ಠಾಣಾ ಪಹರೆ ಕರ್ತವ್ಯದಲ್ಲಿದ್ದ ನಿಮಗೆ ಪಿ.ಎಸ್.ಐ. ರವರು ಸೂಚಿಸಿದಾಗ್ಯೂ ಸಹ ನೀವುಗಳು ಸದರಿ ಆರೋಪಿಗೆ ತಪ್ಪಿಸಿಕೊಳ್ಳಲು ಅವಕಾಶ ಮಾಡಿಕೊಟ್ಟು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಮತ್ತು ಘೋರ ಬೇಜವಾಬ್ದಾರಿತನ ತೋರಿದ ಆರೋಪ"

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೋಲೀಸ್ ಅಧೀಕ್ಷಕರು, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30-5-2011ರ ಆದೇಶದಲ್ಲಿ ಅರ್ಜಿದಾರರಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದ್ದಾರೆ.

**(i) ಶ್ರೀ ಹೆಚ್. ತಿಪ್ಪೇಸ್ವಾಮಿ, ಹೆಚ್.ಸಿ., ಇವರ ವೇತನವನ್ನು ಇವರ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ 3 ವರ್ಷಗಳ ಕಾಲ ಸಂಚಿತ ಪರಿಣಾಮ ಬೀರುವಂತೆ ಕೆಳಗಿಳಿಸಲಾಗಿದೆ. ದಿನಾಂಕ: 03-4-10 ರಿಂದ 06-5-10ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.**

**(ii) ಶ್ರೀ ಜಿ. ಕಾಟಪ್ಪ, ಸಿ.ಪಿ.ಸಿ., ಇವರ ವೇತನವನ್ನು ಇವರ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ 3 ವರ್ಷಗಳ ಕಾಲ ಸಂಚಿತ ಪರಿಣಾಮ ಬೀರುವಂತೆ ಕೆಳಗಿಳಿಸಲಾಗಿದೆ. ದಿನಾಂಕ: 03-4-10 ರಿಂದ 06-5-10ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.**

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03-9-2011ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿರುತ್ತಾರೆ.

**(i) ಶ್ರೀ ಹೆಚ್. ತಿಪ್ಪೇಸ್ವಾಮಿ, ಸಿ.ಹೆಚ್.ಸಿ., ಇವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಭವಿಷ್ಯದ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ತಡೆಹಿಡಿಯಲಾಗಿದೆ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.**

**(ii) ಶ್ರೀ ಜಿ. ಕಾಟಪ್ಪ, ಸಿ.ಪಿ.ಸಿ., ಇವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಭವಿಷ್ಯದ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ತಡೆಹಿಡಿಯಲಾಗಿದೆ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.**

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರ ಹಾಗೂ ಮೇಲ್ಮನವಿ ಪ್ರಾಧಿಕಾರಗಳ ದಂಡನಾದೇಶಗಳನ್ನು ಭಾಗಶ: ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 17 ಪೊಸಿಅ 2012 ಬೆಂಗಳೂರು, ದಿನಾಂಕ: 04-12-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೋಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್. ತಿಪ್ಪೇಸ್ವಾಮಿ, ಸಿ.ಹೆಚ್.ಸಿ.-123, ಮತ್ತು ಜೆ. ಕಾಟಪ್ಪ, ಸಿ.ಪಿ.ಸಿ.-468, ಜಗಳೂರು ಪೋಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇವರುಗಳ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃವಾಗಿ ಪುರಸ್ಕರಿಸಿ, ಮೇಲ್ಮನವಿ ಪ್ರಾಧಿಕಾರದ ದಿನಾಂಕ: 03-9-2011ರ ಆದೇಶವನ್ನು ಮಾರ್ಪಡಿಸಿ, ಮುಂಬರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ (without cummulative effect) ಒಂದು ವರ್ಷದ ಅವಧಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೋಲೀಸ್ ಸೇವೆಗಳು)

P.R.285

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಣ್ಣಶೆಟ್ಟಿ, ಹೆಚ್.ಸಿ.–3608, ವಿಜಯ ನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: 03/ಡಿಇ/ಆರ್–6/07 ದಿನಾಂಕ: 31–12–2010
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರ ಆದೇಶ ಸಂಖ್ಯೆ: 19/ಅಪೀಲು–1/2011 ದಿನಾಂಕ: 15–11–2011
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 20–3–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/1/2012–13 ದಿ: 16–6–2012
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 125 ಸಿಎನ್‌ಎಸ್ 2012 ದಿನಾಂಕ: 26–11–2012

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಸಣ್ಣಶೆಟ್ಟಿ, ಹೆಚ್.ಸಿ., ಇವರು ಈ ಹಿಂದೆ ಬೆಂಗಳೂರಿನ ಜೆ.ಬಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಶಿಸ್ತು, ಬೇಜವಾಬ್ದಾರಿತನ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಸಣ್ಣಶೆಟ್ಟಿ, ಹೆಚ್.ಸಿ.–3608, ಜೆ.ಬಿ. ನಗರ ಪೊಲೀಸ್ ಠಾಣೆ ಆದ ನೀವು ದಿನಾಂಕ: 06–9–2006 ರಂದು ಜೆ.ಬಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದು, ನೀವು ಠಾಣೆಗೆ ಬಂದಾಗಿನಿಂದಲೂ ಸಿಬ್ಬಂದಿಯವರ ಮೇಲೆ ಅಸಭ್ಯವಾಗಿ ವರ್ತಿಸುತ್ತಿದ್ದು, ಆಗಾಗ್ಗೆ ಕುಡಿದು ಠಾಣೆಗೆ ಬರುತ್ತಿದ್ದು ಈ ಬಗ್ಗೆ ಪಿ.ಐ. ರವರು ಈ ಹಿಂದೆ ಮೌಖಿಕವಾಗಿ ಠಾಣೆಗೆ ಕುಡಿದು ಬರದಂತೆ ತಿಳಿಸಿದ್ದರೂ ಸಹ ದಿ: 10–02–2007 ರಂದು ರಾತ್ರಿ 10–05 ಘಂಟೆಯ ಸಮಯದಲ್ಲಿ ಠಾಣೆಯಲ್ಲಿ ಜೋರಾಗಿ ಕೂಗಾಡುತ್ತಿದ್ದು, ಇದು ಪಿ.ಐ. ರವರಿಗೆ ಕೇಳಿಸಿದಾಗ ಠಾಣೆಯ ಪಹರೆ ಕರ್ತವ್ಯದಲ್ಲಿದ್ದ ಪಿ.ಸಿ. 9579 ರವರನ್ನು ಕರೆದು ಕೇಳಲಾಗಿ, ಶ್ರೀ ಸಣ್ಣಶೆಟ್ಟಿ, ಹೆಚ್.ಸಿ.–3608, ರವರು ಕೂಗಾಡುತ್ತಿದ್ದ ಬಗ್ಗೆ ತಿಳಿದುಬಂದಿದ್ದರಿಂದ ಪಿ.ಐ. ರವರು ಹೊರಗೆ ಬಂದು ನೋಡಲಾಗಿ ನೀವು ಶ್ರೀ ಚಿಕ್ಕರಸಯ್ಯ, ಹೆಚ್.ಸಿ. 2268 ರವರ ಜೊತೆ ಜಗಳ ಮಾಡುತ್ತಿದ್ದುದು ಕಂಡುಬಂದಿತು. ಈ ಬಗ್ಗೆ ಪಿ.ಐ. ರವರು ನಿಮ್ಮನ್ನು ಯಾಕೆ ಜೋರಾಗಿ ಮಾತನಾಡುತ್ತಿರುವಿರಿ ಸುಮ್ಮನೆ ಇರ್ರಿ ಎಂದು ಅಂತ ಹೇಳಿದಾಗ ನೀವು ಕುಡಿದ ಅಮಲಿನಲ್ಲಿ (ಮದ್ಯಪಾನ ಮಾಡಿದ ವಾಸನೆಯೊಂದಿಗೆ) ನೀವ್ಯಾರಿ ಕೇಳೋದು ಡಾ: ಪ್ರಕಾಶ್ ನಾನು ಹಾಗೆಯೇ ಮಾತನಾಡುವುದು, ಯಾವ ಬೋಳಿ ಮಕ್ಕಳು ನನ್ನನ್ನು ಏನೂ ಮಾಡಲು ಸಾಧ್ಯವಿಲ್ಲ ಇತ್ಯಾದಿ ಮಾತನಾಡುತ್ತ ಕೂಗಾಡುವುದು ಮಾಡಿರುತ್ತೀರಿ. ಈ ವೇಳೆಗೆ ಪಿ.ಐ. ರವರು ಮದ್ಯಪಾನ ಮಾಡಿ ಠಾಣೆಗೆ ಬಂದಿದ್ದೀಯ ನಡೆಯಿರಿ ಮೆಡಿಕಲ್ ಮಾಡಿಸುತ್ತೇನೆಂದು ಹೇಳಿದಾಗ ಯಾವನೇನು ನನ್ನನ್ನು ಹರ್ಕೊಳಕ್ಕಾಗಲ್ಲ ಅಂತ ಓಡಲು ಪ್ರಯತ್ನಿಸಿರುತ್ತೀರಿ. ಮೆಡಿಕಲ್ ಮಾಡಿಸೋಣ ಹಿಡಿದುಕೊಳ್ಳಿ ಅಂತ ಪಿ.ಐ. ರವರು ಪಿ.ಎಸ್.ಐ., ಹೆಚ್.ಸಿ. 2268, ಪಿ.ಸಿ. 9579 ಹಾಗೂ ಶಿಗ್ಗಾಂವ ಕೆ.ಎಸ್.ಆರ್.ಪಿ. ಸಿಬ್ಬಂದಿಗಳು ನಿಮ್ಮನ್ನು ಜೀಪಿನಲ್ಲಿ ಎತ್ತಿ ಹಾಕಿ ಜೀಪ್ ಸ್ಟಾರ್ಟ್ ಮಾಡಲು ಪ್ರಯತ್ನಿಸಿದಾಗ ನೀವು ಹಿಂಬಾಗಿಲನ್ನು ತೆರೆದು ಕೂಗಾಡುತ್ತ ಓಡಿ ಹೋಗಿರುತ್ತೀರಿ. ತಕ್ಷಣ ಯಾರೋ ನಿಮ್ಮನ್ನು ಮೋಟಾರ್ ಸೈಕಲ್‌ನಲ್ಲಿ ಕರೆದುಕೊಂಡು ಹೋಗಿರುತ್ತಾರೆ. ಈ ರೀತಿ ನೀವು ಜೋರಾಗಿ ಕಿರಚಿ ಗುಂಡಾಗಳ ತರಹ ಉದ್ಧಟತನದಿಂದ ಇಲಾಖೆಯ ಘನತೆ ಗೌರವಕ್ಕೆ ಧಕ್ಕೆ ತರುವ ರೀತಿಯಲ್ಲಿ ವರ್ತಿಸಿ, ಅಶಿಸ್ತು ಬೇಜವಾಬ್ದಾರಿ ಹಾಗೂ ಸೇವಾ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 31–12–2010ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ 3 ವರ್ಷಗಳ ಕಾಲ ತಡೆಹಿಡಿಯಲಾಗಿದೆ ದಿನಾಂಕ: 19–02–2007 ರಿಂದ 25–9–2007 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15–11–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ದಿನಾಂಕ: 31–12–2012ರ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 31 ಪೊಸಿಅ 2012 ಬೆಂಗಳೂರು, ದಿನಾಂಕ: 10–12–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಣ್ಣಶೆಟ್ಟಿ, ಹೆಚ್.ಸಿ.–3608, ವಿಜಯ ನಗರ ಪೊಲೀಸ್ ಠಾಣೆ, ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರದ ದಿನಾಂಕ: 31–12–2010ರ ದಂಡನಾದೇಶವನ್ನು ಮಾರ್ಪಡಿಸಿ, ಇವರ ವಾರ್ಷಿಕ ವೇತನ

ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ (with cummulative effect) ಒಂದು ವರ್ಷದ ಅವಧಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಅಮಾನತ್ತಿನಲ್ಲಿದ್ದ ಅವಧಿ ದಿನಾಂಕ: 19–02–2007 ರಿಂದ ದಿನಾಂಕ: 25–9–2007ರ ವರೆಗಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R.286**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** 2012–13 ನೇ ಸಾಲಿಗೆ RIDF-XVIII ರಡಿ ಅನುಮೋದನೆಗೊಂಡಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಆರ್ಥಿಕ ಇಲಾಖೆ ಪತ್ರದ ಸಂಖ್ಯೆ: ಎಫ್‌ಡಿ 43 ಸಿಐಎಫ್ 2012 ದಿನಾಂಕ: 22–10–2012.

2. ದಿನಾಂಕ: 21–11–2012ನ ನಬಾರ್ಡ್ ಸಂಸ್ಥೆಯ ಪತ್ರಸಂಖ್ಯೆ: NB/SPD/1585/ RIDF-XVIII (Karnataka)/130 PSC/2012–13.

3. ಆರ್ಥಿಕ ಇಲಾಖೆ ಪತ್ರದ ಸಂಖ್ಯೆ: ಎಫ್‌ಡಿ 72 ಜಿಐಇ 2012 ದಿನಾಂಕ: 03–12–2012.

**ಪ್ರಸ್ತಾವನೆ:**

2012–13ನೇ ಸಾಲಿನಲ್ಲಿ ಆರ್.ಐ.ಡಿ.ಎಫ್. XVIII ರಡಿಯಲ್ಲಿ, ನಬಾರ್ಡ್‌ನಿಂದ ಸಾಲ ಪಡೆಯಲು ಹಾಗೂ ಯೋಜನೆಗಳನ್ನು ಪರಿಗಣಿಸಲು ರಚಿಸಲಾಗಿರುವ ಸಚಿವ ಸಂಪುಟ ಉಪಸಮಿತಿಯಿಂದ ಅನುಮೋದನೆ ಪಡೆದು ಸಣ್ಣ ನೀರಾವರಿ ಇಲಾಖೆಗೆ ನೀಡಲಾದ ರೂ.140 ಕೋಟಿ sectoral Allocation ಮೊತ್ತಕ್ಕೆ ಎದುರಾಗಿ ಸಣ್ಣ ನೀರಾವರಿ ಕಾಮಗಾರಿಗಳಿಗೆ, ಸಾಲ ಮಂಜೂರಾತಿ ನೀಡುವಂತೆ, ಅನುಮೋದಿತ ಕಾಮಗಾರಿಗಳ ಪಟ್ಟಿಯನ್ನು ನಬಾರ್ಡ್ ಸಂಸ್ಥೆಗೆ ಉಲ್ಲೇಖ (1) ರಲ್ಲಿ ಆರ್ಥಿಕ ಇಲಾಖೆಯ ಪತ್ರದೊಡನೆ ಕಳುಹಿಸಲಾಗಿದೆ.

ಅದರಂತೆ ಈ ಕಾಮಗಾರಿಗಳ ವಿವರವಾದ ಅಂದಾಜು ಪಟ್ಟಿಗಳನ್ನು ತಯಾರಿಸಿ ಆರ್.ಐ.ಡಿ.ಎಫ್.–XVIII ರಡಿ ಸಾಲ ಸೌಲಭ್ಯ ಮಂಜೂರಾತಿಗಾಗಿ ಪ್ರಸ್ತಾವನೆಯನ್ನು ನಬಾರ್ಡ್ ಸಂಸ್ಥೆಗೆ ಹಂತ ಹಂತವಾಗಿ ಕಳುಹಿಸಲಾಗುತ್ತಿದೆ. ಈ ಪೈಕಿ ನಬಾರ್ಡ್ ಸಂಸ್ಥೆಯು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆರ್.ಐ.ಡಿ.ಎಫ್.–18ರ ಅಡಿಯಲ್ಲಿ ಒಟ್ಟು ರೂ. 8794.25 ಲಕ್ಷ ಅಂದಾಜು ಮೊತ್ತದ 82 ಕಾಮಗಾರಿಗಳ ಅಂದಾಜುಗಳಿಗೆ ಒಟ್ಟು ರೂ.8227.48 ಲಕ್ಷ ಸಾಲ ಸೌಲಭ್ಯವನ್ನು ಮಂಜೂರು ಮಾಡಿದೆ.

ಈ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ನಯೋಕಾ 2012, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2012–13ನೇ ಸಾಲಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್.– XVIII ರಡಿ ಅನುಬಂಧ (1)ರಲ್ಲಿರುವ ಒಟ್ಟು ರೂ. 8227.48 ಲಕ್ಷ ಸಾಲ ಮಂಜೂರಾತಿ ದೊರಕಿರುವ ರೂ. 8794.25 ಲಕ್ಷ (ಎಂಬತ್ತೇಳು ಕೋಟಿ ತೊಂಬತ್ತ ನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಅಂದಾಜು ಮೊತ್ತದ 82 ಕಾಮಗಾರಿಗಳ ಅಂದಾಜುಗಳಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ತಾಂತ್ರಿಕ ಮಂಜೂರಾತಿಯನ್ನು ಸೂಕ್ತವಾದ ಲೆಕ್ಕಶೀರ್ಷಿಕೆ/ಉಪ ಲೆಕ್ಕಶೀರ್ಷಿಕೆಯಡಿ ನೀಡುವುದು. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಅಥವಾ ಮುಖ್ಯ ಇಂಜಿನಿಯರ್‌ಗಳ ನೇತೃತ್ವದಲ್ಲಿ ಇರುವ ತಾಂತ್ರಿಕ ಸಮಿತಿಯ ತೀರುವಳಿಯನ್ನು ನಿಯಮಾನುಸಾರ ಪಡೆಯುವುದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
7. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು. ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ.ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9. ಕಾವೇರಿ ಕೊಳ್ಳದಲ್ಲಿ ಬರುವ ಯೋಜನೆಗಳ ಅನುಷ್ಠಾನವು ಕಾವೇರಿ ನ್ಯಾಯಾಧೀಕರಣದ ಆದೇಶಗಳಿಗೆ ವ್ಯತಿರಿಕ್ತವಾಗಬಾರದು.
10. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11. ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ.( ಸಣ್ಣ ನೀರಾವರಿ)

**P.R.05**